# ಸಿದ್ಧಗಂಗಾ

ಸಂಪುಟ–೧೮ ಸಂಚಿಕೆ ೪ ಏಪ್ರಿಲ್, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

★

ಬಸವಣ್ಣಾ, ನೀವು ಮರ್ತ್ಯಕ್ಕೆ ಬಂದು ನಿಂದರೆ,
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತಯ್ಯಾ
ಸ್ವರ್ಗ ಮರ್ತ್ಯ ಪಾತಾಳ ದೊಳಗೆಲ್ಲಾ ನಿಮ್ಮ
ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರೋ ಅಣ್ಣಾ !
ಶಶಿಧರನಟ್ಟಿದ ಮಣಿಹ ಪೂರೈಸಿತ್ತೆಂದು,
ನೀವು ಲಿಂಗೈಕ್ಯವಾದರೆ,
ನಿಮ್ಮೊಡನೆ ಭಕ್ತಿಹೋಯಿತ್ತಯ್ಯಾ !
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯಾ !
ನಿಮ್ಮೊಡನೆ ಅಸಂಖ್ಯಾತರು ಹೋದರಣ್ಣಾ !
ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತು ಬಸವಣ್ಣಾ !
ಎನ್ನನೊಯ್ಯದೆ ಹೋದೆಯಲ್ಲಾ ಪಂಚಪರುಷ ಮೂರ್ತಿ ಬಸವಣ್ಣಾ!
ಬಸವಣ್ಣ ಪ್ರಿಯ ಚನ್ನಸಂಗಯ್ಯಂಗೆ,
ಪ್ರಾಣ ಲಿಂಗವಾಗಿ ಹೋದೆಯಲ್ಲಾ ಸಂಗನ ಬಸವಣ್ಣಾ !

—ಅಕ್ಕನಾಗಲಾಂಬಿಕೆ

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಭಗವಾನ್ ಬಸವೇಶ್ವರರ ಪುಣ್ಯ ಅವತಾರದಿಂದ ಶರಣಧರ್ಮ ವಿಶ್ವಾದರಣೀಯವಾಯಿತು; ವಿಶ್ವಧರ್ಮವೆನಿಸಿತು. ಯಾವ ಧರ್ಮ ಮಾನವನ ಬದುಕಿನ ಕಲೆಯನ್ನು ಅರಿವು ಮಾಡಿಕೊಟ್ಟು ಕೃತಾರ್ಥರನ್ನಾಗಿ ಮಾಡುತ್ತದೆಯೋ, ತನ್ನ ಚರಮಧ್ಯೇಯವನ್ನು ಸಾಧಿಸಬಲ್ಲುದೋ ಅದೇ ವಿಶ್ವಧರ್ಮ. ಈ ಪ್ರಕಾರವಾಗಿ ಶರಣಧರ್ಮ ಸರ್ವರಿಗೂ ಮುಕ್ತದ್ವಾರವೆನಿಸಿದೆ. ಎಲ್ಲರಿಗೂ ಆತ್ಮೋದ್ಧಾರದ ಹಾದಿಯನ್ನು ತೋರಿಸಿದೆ. ಇಂದಿನ ಅನಂತ ಭೀಕರ ಸಮಸ್ಯೆಗಳಿಗೆ ಪರಿಹಾರ ಮಾರ್ಗ ನೀಡಿದೆ. ಆತ್ಮವಿಶ್ವಾಸ, ರಾಷ್ಟ್ರಪ್ರೇಮ, ಕರ್ತವ್ಯನಿಷ್ಠೆ, ಮುಂತಾದ ಮಾನವೀಯ ಮೌಲ್ಯಗಳನ್ನು ಸಾರಿದೆ. 'ಇವನಾರವ, ಇವನಾರವ, ಇವನಾರವ ಎಂದೆನಿಸದಿರಯ್ಯ; ಇವನಮ್ಮವ, ಇವನಮ್ಮವ ಎಂದೆನಿಸಯ್ಯಾ'. ಎಂಬಂತಹ ವಿಶ್ವಭ್ರಾತೃತ್ವವನ್ನು ಉದ್ಘೋಷಿಸಿದೆ. "ಕಾಯಕವೇ ಕೈಲಾಸ" ಎನ್ನುವಂಥ ಮಹಾನ್ ಉದ್ಧಾರಕ ಮಂತ್ರವನ್ನು ಜಗತ್ತಿಗೆ ಕೊಟ್ಟಿದೆ. ಕಾಯಕ ಎಂಬುದು ಉದರ ಪೋಷಣೆಯಲ್ಲ, ಅದು ಆತ್ಮವಿಕಾಸದ ಮಾಧ್ಯಮ ಎಂದು ಸಾರಿದೆ. ಈ ಕಾರಣ ಇಂದು ನಮ್ಮ ದೇಶದ ಉದ್ಧಾರಕ್ಕೆ ಎಂದಿಗಿಂತ ಇಂದು ಶರಣಧರ್ಮ ಅತ್ಯವಶ್ಯಕವಾಗಿದೆ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

### ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

**ವಾರ್ಷಿಕ ಚಂದಾ 15-00 ರೂ**

**ಆಜೀವ ಸದಸ್ಯತ್ವ 151-00 ರೂ**

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ನಾಡಿನಾದ್ಯಂತ ಬಸವ ಜಯಂತ್ಯುತ್ಸವದ ಆಚರಣೆಯ ಸಡಗರ ಸಂಭ್ರಮ. ಜಯಂತಿಯ ಆಚರಣೆ ಜಾತ್ಯಾತೀತವಾಗಿ ಜರುಗುತ್ತಿದೆ. ಜಾತ್ಯಾತೀತ ತತ್ವದ ಕಹಳೆಯನ್ನೂದಿ ಜನತೆಯನ್ನು ಬಡಿದೆಬ್ಬಿಸಿದ ಮಹಾನ್ ವ್ಯಕ್ತಿಶಕ್ತಿ ಬಸವಣ್ಣ. ಎಂಟು ನೂರು ವರ್ಷಗಳ ಹಿಂದೆ ಕಾಯಕ ತತ್ವದ ಕಳೆಯನ್ನು ಜನಮನದಲ್ಲಿ ಬೇರೂರುವಂತೆ ಮಾಡಿದ ಕಾಯಕಯೋಗಿಯಾತ. ಆ ತತ್ವಾನುಷ್ಠಾನದಿಂದ ಜನತೆ ನಾಡಿನಲ್ಲೆಲ್ಲಾ ಸಮೃದ್ಧಿ ಸಂತೃಪ್ತಿಯನ್ನು ಕಂಡಿತು. "ಉಂಡು ತೇಗಿತು ಲೋಕ ಕೊಂಡಾಡಿ ಕಾಯಕವ ! ಕಂಡಕಂಡಲ್ಲಿ ದಾಸೋಹ" ಇದು ಬಸವಣ್ಣನವರ ಸಮಗ್ರ ಕ್ರಾಂತಿಯ ಪ್ರತಿಫಲ.

ಸಮಾಜ ಸಂದಿಗ್ಧತೆಯಲ್ಲಿದ್ದಾಗ, ನಾಡಿನಲ್ಲಿ ಅರಾಜಕತೆ ತಾಂಡವವಾಡುತ್ತಿದ್ದಾಗ, ದೀನ ದಲಿತರ ಶೋಷಣೆ ಮಿತಿಮೀರಿದಾಗ, ಆರ್ಥಿಕ, ಧಾರ್ಮಿಕ, ಸಾಮಾಜಿಕ, ಸಮಾನತೆಯಿಲ್ಲದ್ದಾಗ, ಮಹಿಳಾ ಸ್ವಾತಂತ್ರ್ಯಗಳಿಲ್ಲದ ಅಂಧಕಾರಮಯ ವಾತಾವರಣದಲ್ಲಿ ಲೋಕಕ್ಕೆ ಹೊಸಬೆಳಕು ನೀಡುವ ಬಸವಸೂರ್ಯ ಉದಯವಾಯಿತು. ಕೇವಲ ಒಂಭತ್ತು ಹತ್ತು ವರ್ಷಗಳಲ್ಲಿ ಬಸವನ ಪ್ರಧಾನ ಮಂತ್ರಿತ್ವದ ಆಳ್ವಿಕೆಯಲ್ಲಿ ವಿದ್ಯುತ್ ಸಂಚಾರವಾಯಿತು. ನಾಡು ನುಡಿ ಧರ್ಮ ಸಂಸ್ಕೃತಿಗಳು ಪುನರುಜ್ಜೀವನ ಪಡೆದುವು. ಅಂತ್ಯೋದಯ ಸಮಾಜ ಕಲ್ಯಾಣಗಳು ಅರ್ಥವತ್ತಾದುವು,

ನಮ್ಮ ಸಮಾಜವಿಂದು ಹನ್ನೆರಡನೆಯ ಶತಮಾನದ ಪರಿಸ್ಥಿತಿಯನ್ನು ಅನುಭವಿಸುತ್ತಿದೆ. ಸಮಾಜ ಬಸವಣ್ಣನಂಥ ಸಮಾಜ ಸುಧಾರಕರನ್ನು ಎದುರು ನೋಡುತ್ತಿದೆ. ವ್ಯಕ್ತಿಯ ನಡೆನುಡಿಗಳು ಸಮಾಜ ಮತ್ತು ರಾಷ್ಟ್ರದ ಮೌಲ್ಯದ ಮೇಲೆ ಪ್ರಭಾವ ಬೀರುತ್ತವೆ. ವ್ಯಕ್ತಿಯ ರಾಷ್ಟ್ರಚಿಂತನೆಯ ಉನ್ನತ ಮೌಲ್ಯಕ್ಕೆ ಒತ್ತು ಕೊಡುವ ನಡೆ ನುಡಿಯ ಆಚರಣೆಯುಳ್ಳವನಾಗಬೇಕು. ಬಸವಣ್ಣನವರು ಬಿಟ್ಟು ಹೋಗಿರುವ ಜ್ಞಾನಭಂಡಾರ ವಿಚಾರಮಂಥನ ಆಚರಣೆಯಲ್ಲಿ ಅಳವಡಬೇಕು. ಆಗ ನಾಡು ನೆಮ್ಮದಿಯನ್ನು ಕಾಣಲು ಸಾಧ್ಯ.

# ನವನೀತ

**ಯಸ್ಯ ಧರ್ಮ ವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ ।**
**ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ ॥**

—ಪಂಚತಂತ್ರ

ಧರ್ಮದ ಆಚರಣೆಯಿಲ್ಲದೆ ಯಾರ ದಿನಗಳು ಕಳೆದುಹೋಗುತ್ತವೆಯೋ ಅಂಥವನು ಕಮ್ಮಾರನ ತಿದಿಯಂತೆ ಉಸಿರಾಡುತ್ತಿದ್ದರೂ ಬದುಕಿರುವವನಲ್ಲ.

§ § § § §

**ಯದ್ಯದಾಚರತಿ ಶ್ರೇಯಾನ್ ಇತರಸ್ತತ್ತದೀಹತೇ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥**

—ಭಾಗವತ

ಜಗತ್ತಿನಲ್ಲಿ ಉತ್ತಮನಾದ ಮನುಷ್ಯನು ಯಾವುದನ್ನು ಮಾಡುತ್ತಾನೋ ಬೇರೆಯವನೂ ಅದನ್ನು ಮಾಡಲು ಆಶಿಸುತ್ತಾನೆ. ಅವನು ಯಾವುದನ್ನು ಪ್ರಮಾಣವೆಂದು ಭಾವಿಸಿ ಮಾಡುತ್ತಾನೋ ಲೋಕವು ಅದನ್ನನುಸರಿಸುತ್ತದೆ.

§ § § § §

**ಪ್ರಿಯ ವಾಕ್ಯ ಪ್ರಧಾನೇನ ಸರ್ವೇ ತುಷ್ಯಂತಿ ಜಂತವಃ ।**
**ತಸ್ಮಾತ್ತದೇವ ವಕ್ತವ್ಯಂ ವಚನೇ ಕಾ ದರಿದ್ರತಾ ॥**

—ಸುಭಾಷಿತ ರತ್ನ ಭಾಂಡಾಗಾರ

ಪ್ರಿಯವಾದ ಮಾತುಗಳನ್ನಾಡುವುದರಿಂದ ಎಲ್ಲ ಪ್ರಾಣಿಗಳೂ ಸಂತೋಷಪಡುತ್ತವೆ. ಆದ್ದರಿಂದ ಪ್ರಿಯವನ್ನೇ ಹೇಳಬೇಕು, ಮಾತಿಗೇನು ಬಡತನವೇ ?

## ಚಿಂತನ (ನಡೆ–ನುಡಿಗಳ ಸಾಮರಸ್ಯ)

—ಟಿ. ಆರ್. ಮಹಾದೇವಯ್ಯ

ಬಾಳಿನಲ್ಲಿ ನಡೆ–ನುಡಿಗಳ ಸ್ಥಾನ ಮಿಗಿಲಾದುದು. 'ನುಡಿಯುವುದೇನು ಮಹಾ. ಯಾರು ಬೇಕಾದರೂ ಮಾಡಬಹುದು' ಎನ್ನುವಂತಿಲ್ಲ. ನುಡಿಯುವುದಕ್ಕೂ ಕೆಲವು ರೀತಿ–ನೀತಿಗಳಿವೆ. ಏಕೆಂದರೆ 'ಮಾತಿನಿಂ ನಗೆ–ಹಗೆಯು, ಮಾತಿನಿಂ ಸರ್ವಸಂಪದವು, ಮಾತು ಮಾಣಿಕ್ಯ, ಮಾತು ಜ್ಯೋತಿರ್ಲಿಂಗ' ಎಂದು ಮುಂತಾಗಿ ನುಡಿ ಬಲ್ಮೆಯನ್ನು ಸಾರಿದ್ದಾರೆ ಅನುಭಾವಿಗಳು. 'ಪದನರಿದು ನುಡಿಯಲುಂ, ನುಡಿದುದನಾರಯ್ಯಲುಂ ಆರ್ಪರ್ ನಿಜದಿಂ ಚದುರರ್' ಎಂದು ಕವಿರಾಜ ಮಾರ್ಗಕಾರ ನಾಡವರ ನುಡಿಬಲ್ಮೆಯನ್ನು ಕೊಂಡಾಡಿದ. ಬಸವಣ್ಣನವರು ನಾವು ಹೇಗೆ ನುಡಿಯಬೇಕು ? ಹೇಗೆ ನುಡಿದರೆ ಅದು ಸುಸಂಗತವಾಗುತ್ತದೆ, ದೇವರು ಮೆಚ್ಚಿ ತಲೆದೂಗುತ್ತಾನೆ ಎಂಬುದನ್ನು ಹೃದ್ಯವಾಗಿ ತಿಳಿಸಿದ್ದಾರೆ.

ಇನ್ನು ನಡೆ, ನಡವಳಿಕೆ, ಕ್ರಿಯಾಚರಣೆಯ ಬಗ್ಗೆಯೂ ಸೂಕ್ತಮಾರ್ಗದರ್ಶನ ನೀಡಿದ್ದಾರೆ. ತತ್ತ್ವಗಳನ್ನು ಬರೀ ನುಡಿದರೆ ಸಾಲದು. ಅವನ್ನು ಬಾಳಲ್ಲಿ ಅನುಷ್ಠಾನಕ್ಕೆ ತರಬೇಕು, ಆಚರಿಸಿ ತೋರಬೇಕು. ರುಚಿರುಚಿಯಾದ ತಿಂಡಿ–ತೀರ್ಥಗಳ ಹೆಸರು ಹೇಳಿಕೊಂಡು ನಾವು ಮಾತನಾಡಿದಾಕ್ಷಣಕ್ಕೆ ನಮ್ಮ ಹೊಟ್ಟೆ ತುಂಬುವುದಿಲ್ಲ. ಅದನ್ನು ತಿನ್ನುವ ಕ್ರಿಯೆ ನಡೆದಾಗ ಮಾತ್ರ ಹೊಟ್ಟೆತುಂಬಿ ಹಸಿವು ಹಿಂಗುವುದು. ಅಂತೆಯೇ ಉಳಿದೆಲ್ಲವೂ. ಜೀವನದಲ್ಲಿ ನಡೆ–ನುಡಿಗಳ ಮೇಳೈಕೆ ಒಂದು ಅಪೂರ್ವವಾದ ಸಂಗಮ. ಇದನ್ನು ಸಾಧಿಸಿದ ವ್ಯಕ್ತಿ, ಅಂಥ ವ್ಯಕ್ತಿಗಳಿಂದ ಕೂಡಿದ ಸಮಾಜ ಧನ್ಯ. 'ನಡೆದಂತೆ ನುಡಿ, ನುಡಿದಂತೆ ನಡೆ, ಇದೆ ಜನ್ಮಕಡೆ' ಎಂದರು ಜ್ಞಾನಿಗಳು. ನಡೆ–ನುಡಿಗಳ ಹೊಂದಾಣಿಕೆಯಿಂದ ಯಾರು ಬಾಳುತ್ತಾರೋ ಅವರು ಭವವನ್ನು ಗೆಲ್ಲುತ್ತಾರೆಂದು ಅವರು ಬಾಳಿ ತೋರಿಸಿದರು. ಆದರೆ ಸಮಾಜದಲ್ಲಿ ನಡೆಯುತ್ತಿರುವ ರೀತಿಯೇ ಬೇರೆ. ನಮ್ಮಲ್ಲಿ ಬಹುಮಂದಿ ವಾಕ್‌ಶೂರರೇ, ನುಡಿಗಲಿಗಳೇ ; ಆಶ್ವಾಸನೆ ಕೊಡುವುದರಲ್ಲಿ ತುಂಬಾ ಧಾರಾಳಿಗಳು. ಅವನ್ನು ಈಡೇರಿಸಲು ಪ್ರಾಮಾಣಿಕವಾಗಿ ಶ್ರಮಿಸುವವರು ಎಷ್ಟು ಮಂದಿ? ಅದಕ್ಕೆ ಸರ್ವಜ್ಞ ಹೇಳಿದ್ದು ಎಲ್ಲರೂ ಮಾತಿನ ಭಂಟರೆಂದು :

**ವಚನದೊಳೆಲ್ಲರು ಶುಚಿ, ಧೀರ, ಸಾಧುಗಳು । ಕುಚ, ಶಸ್ತ್ರ, ಹೇಮ ಸೋಕಿದರೆ ಲೋಕದೊಳ । ಗಚಲರಾಗದವರಾರು ಸರ್ವಜ್ಞ ।**

ತಾನೊಬ್ಬ ಮಹಾಶೀಲವಂತ, ತಾನು ದೊಡ್ಡ ಶೂರ, ತಾನು ವೈರಾಗ್ಯಸಾಧಿಸಿದ ಸಂನ್ಯಾಸಿ ಎಂದು ಕೆಲವರು ಹೇಳಿಕೊಳ್ಳುತ್ತಾರೆ. ಅಂಥವರಿಗೆ ಕ್ರಮವಾಗಿ ಕುಚ, ಆಯುಧ ಹಾಗೂ ಚಿನ್ನ–ಇವುಗಳ ಸಂಪರ್ಕವಾದಾಗ ವಿಚಲಿತರಾಗದೆ ಇರುತ್ತಾರೆಯೇ? ಎಂದು ಪ್ರಶ್ನಿಸಿದ್ದಾನೆ. ಅವನೇ ಮುಂದುವರಿದು ನಡೆ-ನುಡಿಗಳ ಹೊಂದಾಣಿಕೆ ಸದ್ಗುಣಗಳ ಬೆಳವಿಗೆ ಕಾರಣವಾಗುತ್ತದೆಂದು ಸಾರಿದ್ದಾನೆ :

**ಆಡದೆ ಮಾಡುವವ ರೂಢಿಯೊಳುತ್ತಮನು। ಆಡಿ ಮಾಡುವವ ಮಧ್ಯಮನು ಆಡಿ। ಮಾಡದವ ಅಧಮನು ಕಾಣಯ್ಯ॥**

ಮಾತನಾಡುವುದು ಸುಲಭ ಮಾತನಾಡಿದಂತೆ ನಡೆದಾತ ಕೂತಲ್ಲಿ ಜಗವನ್ನು ಆಳಬಲ್ಲವನಾಗುತ್ತಾನೆ ಎಂಬುದು ಅವನ ಸ್ಪಷ್ಟ ಅಭಿಪ್ರಾಯ.

# ಕ್ಷೇತ್ರವಾರ್ತೆ

—ಪಿ. ಎಸ್. ಚಂದ್ರಶೇಖರಯ್ಯ

ಭಗವಾನ್ ಬಸವಣ್ಣನವರು ಎಂಟುನೂರು ವರ್ಷಗಳ ಹಿಂದೆ ಹೊತ್ತಿಸಿದ ಜ್ಞಾನಜ್ಯೋತಿಯ ಕುರುಹೇ ಅನೇಕ ಮಠಮಾನ್ಯಗಳು ಹುಟ್ಟಿ ಬೆಳೆಯಲು ಕಾರಣ. ಬಸವತತ್ವ ಪ್ರಚಾರ ಮತ್ತು ಅನುಷ್ಠಾನ ಕಾರ್ಯವೇ ಅವುಗಳ ಮುಖ್ಯ ತತ್ವ. ಅಂತೆಯೇ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು ಆ ತತ್ವಾನುಷ್ಠಾನಗೈದ ಅಭಿನವ ಅಲ್ಲಮರಾಗಿ ನಾಡಿನ ಉದ್ದಗಲಕ್ಕೂ ಬಸವ ಕಿರಣ ಪ್ರಚಾರಕರಾಗಿ ಆ ಮಹಾ ಕೈಂಕರ್ಯದಲ್ಲಿ ತೊಡಗಿದ್ದಾರೆ. ಸುಮಾರು ನಾಲ್ಕೈದು ವರ್ಷಗಳಿಂದಲೂ ಗ್ರಾಮಾಂತರ ಬಸವ ಜಯಂತ್ಯುತ್ಸವದ ಕಾರ್ಯಕ್ರಮವನ್ನು ರೂಪಿಸಿಕೊಂಡು ಪ್ರಚಾರ ಕಾರ್ಯದಲ್ಲಿ ತೊಡಗಿದ್ದಾರೆ. ಅಂತೆಯೇ ಪ್ರಸಕ್ತ ವರ್ಷದಲ್ಲಿಯೂ ಅನೇಕ ಕಾರ್ಯಕ್ರಮಗಳು ಜರುಗಿದುವು. ಶ್ರೀ ಕ್ಷೇತ್ರದಲ್ಲಿ ಇತಿಹಾಸಪ್ರಸಿದ್ಧ ಸುವರ್ಣ ಮಹೋತ್ಸವ ಕಾರ್ಯಕ್ರಮ ಇದ್ದರೂ ಬಸವಣ್ಣನವರ ತತ್ವ ಪ್ರಚಾರ ಕಾರ್ಯಕ್ಕೆ ತಡೆಯುಂಟಾಗಬಾರದೆಂಬುದೇ ಶ್ರೀ ಶ್ರೀಗಳವರ ಆಶಯ. ಗ್ರಾಮಾಂತರ ಬಂಧುಗಳ ಉತ್ಸಾಹ ಕುಗ್ಗಬಾರದು.

ಅವರಲ್ಲಿ ಧಾರ್ಮಿಕ ಭಾವನೆ ತಲೆದೋರಿ ಜೀವನ ರಸಮಯವಾಗಿ ನೆಮ್ಮದಿಯಿಂದ ಬಾಳ್ವಿಕೆ ನಡೆಸಬೇಕೆಂಬುದುದೇ ಶ್ರೀಗಳವರ ಮಹತ್ವಾಕಾಂಕ್ಷೆ. ಜನಕಲ್ಯಾಣ ಸಾಧನೆಯೇ ತಮ್ಮ ಮುಖ್ಯ ಗುರಿಯನ್ನಾಗಿ ಕಂಡ ಶ್ರೀಗಳವರು ಈ ವರ್ಷ ಹಾಸನ, ಬೆಂಗಳೂರು ಜಿಲ್ಲೆ, ದೊಡ್ಡ ಹೆಜ್ಜಾಜಿ, ದೊಡ್ಡಬಳ್ಳಾಪುರ, ತುಮಕೂರು ಜಿಲ್ಲಾ ಕೋರ, ಬಿಟ್ಟದ ಹಳ್ಳಿ, ಚನ್ನರಾಯಪಟ್ಟಣ ತಾಲ್ಲೂಕು ಯಾಚನಘಟ್ಟ, ಕಡೂರು ತಾಲ್ಲೂಕು ಬಾಸೂರು ಬೆಂಗಳೂರು ಮತ್ತು ಸಕಲೇಶಪುರ ಮುಂತಾದ ಕಡೆಗಳಲ್ಲಿಯೂ ಬಸವ ಜಯಂತಿ ಕಾರ್ಯಕ್ರಮಗಳನ್ನು ನಡೆಸಿದರು. ದಿನವಿಡೀ ಬಸವಣ್ಣನವರ ಜೀವನ ತತ್ವಗಳನ್ನು ಗ್ರಾಮಾಂತರ ಬಂಧುಗಳಿಗೆ ಉಣಬಡಿಸುವ ಕಾರ್ಯಕ್ರಮ.

ಜನತೆ ಉತ್ಸಾಹ ಸಂಭ್ರಮದಿಂದ ಭಾಗಿಗಳಾಗುವುದು ಶ್ರೀಗಳವರಿಗೆ ಅತ್ಯಂತ ಹರ್ಷವನ್ನುಂಟುಮಾಡಿದೆ. ಬೆಳಿಗ್ಗೆ ಮತ್ತು ಸಂಜೆ ಕಾರ್ಯಕ್ರಮಗಳಂತೆ ಎರಡು ಕಾರ್ಯಕ್ರಮಗಳು. ವಿದ್ವಾಂಸರ ಭಾಷಣ ಪ್ರವಚನ. ಅನಂತರ ಎರಡೂ ಸಭೆಗಳು ಶ್ರೀ ಶ್ರೀಗಳವರ ಆಶೀರ್ವಚನದಿಂದ ಮುಕ್ತಾಯ. ರಾತ್ರಿ ಶ್ರೀ ಕ್ಷೇತ್ರದ ಕಲಾವಿದರಿಂದ ಶ್ರೀ ಬಸವೇಶ್ವರ ನಾಟಕದ ಅಭಿನಯ. ಮಧ್ಯಾಹ್ನ ಸಮಸ್ತ ಭಕ್ತಸಮುದಾಯಕ್ಕೆ ದಾಸೋಹ ವ್ಯವಸ್ಥೆಯನ್ನು ಆ ಗ್ರಾಮ ಮತ್ತು ಸುತ್ತಮುತ್ತಲಿನ ಜನತೆ ಕೈಗೊಳ್ಳುತ್ತದೆ. ನಾಟಕ ಮುಂತಾದ ಬಹುಪಾಲು ಖರ್ಚನ್ನು ಶ್ರೀ ಶ್ರೀಗಳವರೇ ನಿರ್ವಹಿಸುವುದು ತತ್ವ ಪ್ರಚಾರಕ್ಕೆಂದೇ ವಿನಿಯೋಗ.

# ಅಸ್ಪೃಶ್ಯತಾ ನಿವಾರಣೆಯಲ್ಲಿ ಬಸವಣ್ಣನವರ ಆದರ್ಶ

—ಚನ್ನವೀರ ಕಣವಿ

ತಮ್ಮಷ್ಟಕ್ಕೆ ತಾವು ಧ್ಯಾನ, ಪೂಜೆಗಳಲ್ಲಿ ಮಗ್ನರಾಗಿ ಬರಿಯ ಪಾರಮಾರ್ಥಿಕ ಚಿಂತನೆಯಲ್ಲಿ ತೊಡಗಿ ಮೋಕ್ಷವನ್ನು ಗಳಿಸಿಕೊಂಡವರು ನಮ್ಮ ನಾಡಿನಲ್ಲಿ ಅನೇಕರಿರಬಹುದು. ಆದರೆ ಆಧ್ಯಾತ್ಮಿಕ ಸಾಧನೆ ಸಿದ್ಧಿಗಳನ್ನು ತಮ್ಮ ಜೀವನದ ಗುರಿಯಾಗಿಟ್ಟುಕೊಂಡೂ ಸುತ್ತಣ ಜನತೆಯ ಕಲ್ಯಾಣಕ್ಕಾಗಿ ಸೇವಾನಿರತರಾಗಿ ತಮ್ಮ ಶಕ್ತಿಯನ್ನೆಲ್ಲ ಅದಕ್ಕಾಗಿ ಧಾರೆಯೆರೆದು ಕೃತಕೃತ್ಯರಾದವರಲ್ಲಿ ಬಸವಣ್ಣನವರು ಅಗ್ರಗಣ್ಯರೆಂದು ಹೇಳಬಹುದು. ಅವರು ಬರಿಯ ಉಪದೇಶಕರಾಗದೆ ನಡೆ ನುಡಿಗಳಲ್ಲಿ ಅದನ್ನು ಸಾಧಿಸಿ ತೋರಿಸಿದ ಧೀರ ನಾಯಕರಾಗಿದ್ದರು. ಯಾವುದೋ ಒಂದು ಗಳಿಗೆಯ ಸ್ಫೂರ್ತಿಯಿಂದ ಧಾರ್ಮಿಕ ಸಾಮಾಜಿಕ ಸುಧಾರಣೆಯಲ್ಲಿ ಕೈಹಾಕಿ ವಿರೋಧಶಕ್ತಿಗಳು ಹೆಚ್ಚಿದೆಡನೆ ಕೈಚೆಲ್ಲಿ ಕುಳಿತುಕೊಳ್ಳುವ ಮನೋಧರ್ಮ ಅವರದಾಗಿರಲಿಲ್ಲ. ಬಾಲ್ಯದಿಂದಲೇ ಕ್ರಾಂತಿಪಥದಲ್ಲಿ ಕಾಲಿರಿಸಿದ ಅವರು ಆರಾಧ್ಯದೈವವಾದ ಕೂಡಲ ಸಂಗಮನ ಬೆಳಕಿನಲ್ಲಿ ಆತ್ಮತೇಜಸ್ಸಿನಿಂದ ನಡೆದು ಧಾರ್ಮಿಕ ಮೂಢ ಭಾವನೆಗಳನ್ನು ಹೊಡೆದೋಡಿಸಿ ಸಾಮಾಜಿಕ ಅನ್ಯಾಯಗಳನ್ನು ಪ್ರತಿಭಟಿಸಿ, ಹೊಸ ಸಮಾಜವನ್ನು ನಿರ್ಮಿಸುವತ್ತ 'ಮರ್ತ್ಯಲೋಕ ಶಿವಲೋಕವೆರಡಕ್ಕೂ ನಿಚ್ಚಣಿಗೆ' ಯಾದರು.

ಮೇಲು-ಕೀಳೆನ್ನದೆ :- ವ್ಯಕ್ತಿಯ ವಿಕಾಸಕ್ಕೆ ಆತಂಕವನ್ನೊಡ್ಡುವ ಸಂಪ್ರದಾಯದಲ್ಲಿಯ ಕೆಲಸಕ್ಕೆ ಬಾರದ ಅಂಶಗಳನ್ನು ಆಚರಣೆಗಳನ್ನು ಕಿತ್ತುಹಾಕಿ, ಸ್ವತಂತ್ರವಾದ ವಿಚಾರಶಕ್ತಿಯಿಂದ ಮುನ್ನಡೆದು, ಕೂಡಲ ಸಂಗನ ಶರಣರು ಸ್ವತಂತ್ರರು, ಧೀರರು, ಎಂದು ಘೋಷಿಸಿದರು. ಸಮಾಜವನ್ನು ಎಲ್ಲ ಹಂತಗಳಲ್ಲಿಯೂ ಪರೀಕ್ಷಿಸಿ, ಅವರು ಕಟ್ಟುಕಟ್ಟಳೆಗಳನ್ನು ಪರಿಶೀಲಿಸಿ ಅಲ್ಲಿ ನಡೆಯುವ ಅನ್ಯಾಯ ಅನಾಚಾರಗಳನ್ನು ಕಂಡುಹಿಡಿದು ಎಂಥ ವಿರೋಧಗಳಿಗೂ ಮಣಿಯದೆ ಅವುಗಳ ನಿರ್ಮೂಲನೆಗಾಗಿ ಅವರ ವ್ಯಕ್ತಿತ್ವದಿಂದ ಆಕರ್ಷಿತರಾಗಿ ಅನೇಕ ಶರಣರು ಆ ಹೋರಾಟದಲ್ಲಿ ಪಾಲುಗೊಂಡರು. ಹೆಣ್ಣು-ಗಂಡೆನ್ನದೆ, ಮೇಲ ಕೀಳೆನ್ನದೆ, ಹಾರುವ–ಹೊಲೆಯರೆನ್ನದೆ, ಬಡವ-ಬಲ್ಲಿದರೆನ್ನದೆ ಶರಣ ಧರ್ಮದ ದೀಕ್ಷೆಯನ್ನು ಪಡೆದು ಸರ್ವಸಮಾನತೆಯ ಸುಖವನನುಭವಿಸಿ, ಸಾಮಾನ್ಯಜನತೆಯ ಅಜ್ಞಾನವನ್ನು ಭೇದಿಸಿ ನಿಜವಾದ ಧರ್ಮದ ದಾರಿಯನ್ನು ತೋರಿಸಿಕೊಟ್ಟರು. ಆ ಧರ್ಮ ಸಮಾಜ ಪ್ರಧಾನವಾಗಿದ್ದದೂ ಒಂದು ವಿಶೇಷ

ಧರ್ಮವೆಂದರೆ ಏನೋ ತಮ್ಮ ಕೈಗೆ ನಿಲುಕದ ವಸ್ತುವೆಂದು ಭಾವಿಸಿದ್ದ ಸಾಮಾನ್ಯ ಜನತೆಗೆ ' ನಂಬಿ ಕರೆದರೆ ಓ ಎಂಬ ಶಿವನು ' ಎಂದಾಗ, ಅಂತರಂಗ ಶುದ್ಧಿ ಬಹಿರಂಗ ಶುದ್ಧಿಯಿಂದ ದೇವರನ್ನೊಲಿಸಬೇಕೆಂದಾಗ, 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ' ಎಂದು ಮುಂತಾಗಿ ಸರಳವಾಗಿ ತಿಳಿಸಿದಾಗ, ಅಗಮ್ಯ ವಾದ ಪರಮಾತ್ಮನನ್ನು ಕರಿದಿಷ್ಟಲಿಂಗವಾಗಿ ತಂದು ಕೊಟ್ಟಾಗ, ಕೂಡಲ ಸಂಗನ ಶರಣರೆಲ್ಲರೂ ಕುಲಜರು ಎಂದು ಭರವಸೆಯಿತ್ತಾಗ, 'ದಯವೇ ಧರ್ಮದ ಮೂಲ' ಎಂದು ಬೋಧಿಸಿದಾಗ ಅವರಿಗೆ ಎಷ್ಟೊಂದು ಸಂತೋಷವಾಗಿರ ಬೇಡ ! 'ಎನಗಿಂತ ಕಿರಿಯರಿಲ್ಲ' 'ಮಾವಿನಕಾಯಿಯೊಳಗೊಂದು ಎಕ್ಕೆಯಕಾಯಿ ನಾನು' ನಿಮ್ಮ ಶರಣ ಮನೆಯ ಮಗನಾನಯ್ಯ' ಎಂದು ಬಸವಣ್ಣನವರು ತಮ್ಮ ವಿಷಯವನ್ನೂ ಸೌಜನ್ಯ ವನ್ನೂ ಮೆರೆದಾಗ ಆ ಆತ್ಮೀಯತೆಯಲ್ಲಿ ಮಿಂದು ಮಡಿಯಾಗದವರಾರು ?

ಬಸವಣ್ಣನವರು ಸಾರಿದ 'ಕಾಯಕ' ತತ್ವ ಶರಣ ಧರ್ಮದ ಜೀವನಾಡಿಯಾಗಿ ತ್ತೆನ್ನಬಹುದು. ಅಂದಿನ ಪರಿಸ್ಥಿತಿಯಲ್ಲಿ (ಇಂದೂ ಅಷ್ಟೆ) ಇದೊಂದು ಕ್ರಾಂತಿ ಕಾರಕ ತತ್ವವಾಗಿ ಪರಿಣಮಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ದೈಹಿಕ ಶ್ರಮದಿಂದ ತನ್ನ ಅನ್ನವನ್ನು ಪಡೆಯಬೇಕು. ಪರಾವಲಂಬನೆಯಿಲ್ಲದೆ ತನ್ನ ಕಾಲ ಮೇಲೆ ನಿಲ್ಲುವ ಉದ್ಯೋಗಶೀಲತೆಯನ್ನು ಇದು ಉಂಟುಮಾಡುತ್ತದೆ. 'ಕಾಯ ಕವೇ ಕೈಲಾಸ, ಎಂದು ಬಸವಣ್ಣನವರು ಅದರ ಹಿರಿಮೆಯನ್ನು ಸಾರಿದಂತೆಯೇ 'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದದು ಲಿಂಗಕ್ಕರ್ಪಿತವಲ್ಲದೆ, ದುರಾಸೆ ಯಿಂದ ಬಂದುದು ಅನರ್ಪಿತವೆಂದು, ಗುರುವಾದರು ಕಾಯಕದಿಂದಲೇ ಜೀವನ್ಮುಕ್ತಿ, ಎಂದೂ ಉಳಿದ ಶರಣರೂ ದೃಢವಾಗಿನಂಬಿದರು. ಸೋಮಾರಿಯಾಗಿ ಕಾಲಕಳೆಯು ವದಾಗಲಿ, ಭಿಕ್ಷೆಯಿಂದ ಜೀವನ ನಡೆಸುವದಾಗಲಿ ಸಲ್ಲದು. ಎಲ್ಲ ವೃತ್ತಿಗಳೂ ಸಮಾನ ಗೌರವವುಳ್ಳವುಗಳು ಅದರಲ್ಲಿ ಹೆಚ್ಚುಕಡಿಮೆಯೆಂದು, ಭಾವಿಸಕೂಡದು 'ಕಾಸಿಮ್ಮಾರ ತನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವ ನಾದ.' ಸುಭದ್ರವೂ ಸ್ವಯಂ ಪೂರ್ಣವೂ ಆದ ಸಮಾಜ ರಚನೆಗೆ ಶಿವಶರಣರು ನೀಡಿದ ಅಮೋಘ ಕಾಣಿಕೆಯೆಂದರೆ ಈ ಕಾಯಕ ತತ್ವವೆಂದು ಹೇಳಬಹುದು. 'ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು. ಲಿಂಗಪೂಜೆ ಯಾದರೂ ಮರೆಯಬೇಕು. ಜಂಗಮ ಮುಂದಿದ್ದರೂ ಮರೆಯಬೇಕು ' ಎಂಬಲ್ಲಿ ಕಾಯಕ ಗುರುಲಿಂಗ ಜಂಗಮಕ್ಕಿಂತ ಹೆಚ್ಚು ಎಂಬುದನ್ನು ಒತ್ತಿ ಹೇಳಲಾಗಿದೆ. ಇದ ರಿಂದ ಸಮಾಜದಲ್ಲಿ ಬಡವ ಬಲ್ಲಿದರೆಂಬ ಭೇದವಳಿದು ಅವರವರ ವೃತ್ತಿಗನುಸರಿಸಿ ಎಲ್ಲರೂ ಸಮಾನರೆಂಬ ಭಾವನೆ ಸಹಜವಾಗಿಯೇ ಮೂಡಲು ಅವಕಾಶವಾಯಿತು ಹೀಗೆ ನೂರಾರು ಕಾಯಕಗಳಲ್ಲಿ ತೊಡಗಿದವರೆಲ್ಲರೂ ಯಾವ ತಾರತಮ್ಯವೂ ಇಲ್ಲದೆ

ಅನುಭವ ಮಂಟಪದಲ್ಲಿ ಕಲೆತು ಆಧ್ಯಾತ್ಮಿಕ ಚರ್ಚೆಯಲ್ಲಿ ಭಾಗವಹಿಸುತ್ತಿರುವ ದೃಶ್ಯ ಎಷ್ಟೊಂದು ರೋಮಾಂಚಕಾರಿಯಾಗಿರಬೇಡ ಅವರ ಕಾಯಕವನ್ನು ಬರೀ ಒಂದು ಜೀವನೋಪಾಯಕ್ಕಾಗಿ ಅವಲಂಬಿಸಿದ ವೃತ್ತಿ ಎಂದು ಭಾವಿಸದೆ ಅದರ ಮೂಲಕ ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ಕಂಡು ಕೊಂಡದ್ದು ಶರಣರ ವೈಶಿಷ್ಟ್ಯವಾಗಿದೆ.

'ದೈವ ದೈವವೆಂದು ಕಾಲಿಡಲಿಂಬಿಲ್ಲದ ಪರಿಸ್ಥಿತಿಯಲ್ಲಿ ಜನರ ಮನಸ್ಸನ್ನು ಏಕ ದೇವೋಪಾಸನೆಯ ಕಡೆಗೆ ಹೊರಳಿಸಿ, ಮಾರಿ ಮಸಣಿ ಮುಂತಾದ ಕ್ಷುದ್ರ ದೈವಗಳ ಪೂಜೆಯಿಂದ ದೂರಮಾಡಿ ದೇವನೊಬ್ಬ, ನಾಮ ಹಲವು' ಎಂಬುದನ್ನು ಮನಗಾಣಿಸಿ ಕೊಡುವುದರ ಜೊತೆಗೆ ಪರಮ ಪತಿವ್ರತೆಗೆ ಗಂಡನೊಬ್ಬನೇ ಇರುವಂತೆ ಪೂಜೆಗೆ ಒಬ್ಬನೇ ದೇವ ತಕ್ಕವನೆಂಬುದನ್ನು ಒತ್ತಿ ಹೇಳಿದರು. ಇದರಿಂದ ಅವರವರ ಕಂಡರೆ ಅವರವರಂತೆ ಆಗುವ ಜನದ ಅಸ್ಥಿರವಾದ ಡೋಲಾಯಮಾನಸ್ಥಿತಿಯನ್ನು ಹೋಗಲಾಡಿಸಿದರು. ಭವಿಗಳಾದವರು ಭಕ್ತರಾದ ಮೇಲೆ ಅವರಲ್ಲಿ ಕುಲ ಭೇದವನ್ನು ಮಾಡಕೂಡದೆಂದರು. ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗುವದನ್ನು ಖಂಡಿಸಿ ಸ್ಥಾವರ ಲಿಂಗಪೂಜೆಯನ್ನು ಶರಣ ಧರ್ಮ ವಿರೋಧಿಸಿತ್ತು. ಬಡವರನ್ನು ಉದಾಸೀನದಿಂದ ಕಾಣುವದನ್ನು ಖಂಡಿಸಿ 'ಮನೆ ನೋಡಾ ಬಡವರು ಮನ ನೋಡಾಘನ' ಎಂದು ಶೀಲ, ಚಾರಿತ್ರ್ಯಗಳೇ ನಿಜವಾದ ಶ್ರೀಮಂತಿಕೆಯೆಂಬುದನ್ನು ತೋರಿಸಿದರು.

ಸ್ತ್ರೀಯರಿಗೆ ಸಮಾನ ಸ್ಥಾನ:- ಸ್ತ್ರೀಯರಿಗೆ ಪುರುಷರಷ್ಟೇ ಸಮಾನಾದ ಹಕ್ಕುಗಳನ್ನೂ ಅವಕಾಶಗಳನ್ನೂ ಒದಗಿಸಿಕೊಟ್ಟು 'ಹೆಣ್ಣು ಮಾಯೆ' ಎಂದು ತಿರಸ್ಕರಿಸುತ್ತ ಬಂದ ಕುರುಡು ಪರಂಪರೆಯನ್ನು ಹೋಗಲಾಡಿಸಿದ್ದು ಬಸವಣ್ಣನವರು ಕೈಕೊಂಡ ಮತ್ತೊಂದು ಮಹತ್ವದ ಸುಧಾರಣೆಯಾಗಿದೆ. ಸ್ತ್ರೀ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಆಕೆಯನ್ನು ಗೌರವದಿಂದ ಕಂಡು ಸಾಮಾಜಿಕ ಧಾರ್ಮಿಕ ಸಮಾನತೆಯನ್ನು ತಂದು ಕೊಟ್ಟ ಶ್ರೇಯಸ್ಸು ವಚನಕಾರರದು. 'ಪರ ವಧುವನು ಮಹಾದೇವಿಯೆಂದು ಕಾಂಬೆ' ಎಂಬ ಬಸವಣ್ಣನವರ ನುಡಿ ಉತ್ತಮ ಸಾಮಾಜಿಕ ರೀತಿ ನಡೆತೆಯ ಕುಡಿಯಾಗಿದೆ. ಇದೇ ಸಂದರ್ಭದಲ್ಲಿ ಅನೇಕ ಶಿವ ಶರಣೆಯರು ವಚನಕಾರ್ತಿಯರಾದರು ಅನುಭವ ಮಂಟಪದಲ್ಲಿ ಪುರುಷರೊಡನೆ ಸರಿಸಮಾನವಾಗಿ ಕುಳಿತು ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಇಷ್ಟೇ ಅಲ್ಲ, ಲಕ್ಕಮ್ಮ, ಮುಕ್ತಾಯಕ್ಕ, ನೀಲಲೋಚನೆ ಮುಂತಾದವರ ವ್ಯಕ್ತಿತ್ವದ ಪ್ರಭಾವ ಪುರುಷರ ತಪ್ಪುಗಳನ್ನು ತಿದ್ದುವಂತೆ ಮಾಡಿತು ಅಕ್ಕ ಮಹಾದೇವಿ ಮುಕ್ತಾಯಕ್ಕರಂತಹ ಶ್ರೇಷ್ಠ ಅನುಭಾವಿಗಳನ್ನು ಕನ್ನಡ ನಾಡು ಕಂಡಿತು.

ಹೀಗೆ ಬಸವಣ್ಣನವರು ಹಾಗೂ ಇನ್ನುಳಿದ ಶರಣರು ಸಮಾಜದ ಲೋಪ ದೋಷಗಳನ್ನು ತಿದ್ದಿ ಅನ್ಯಾಯಗಳನ್ನು ಪ್ರತಿಭಟಿಸಿ ಜನರ ಮನಸ್ಸನ್ನು ಎಚ್ಚರಿಸಿ ದರು. ಸಂಪ್ರದಾಯನಿಷ್ಠರು ಎಷ್ಟೇ ವಿರೋಧಿಸಿದರೂ, ಅವರಿಂದ ಒದಗಿಸಿದ ಕಷ್ಟ ನಷ್ಟಗಳನ್ನು ಧೈರ್ಯದಿಂದ ಎದುರಿಸಿದರೇ ವಿನಃ ಅವರಿಗೆ ಮಣಿಯಲಿಲ್ಲ. 'ಆರು ನಮ್ಮನೇನು ಮಾಡುವರು? ಊರು ಮುನಿದು ನಮ್ಮನೆಂತು ಮಾಡುವರು' ಎಂಬ ಕೆಚ್ಚಿನಿಂದ ಆನೆಯ ದಾರಿಯಲ್ಲೇ ನಡೆದರು ನ್ಯಾಯನಿಷ್ಠುರಿಗಳಾಗಿ ತಮ್ಮ ಆದರ್ಶ ದೆಡೆಗೆ ಸಾಗಿದರು. ಸಮಾಜ ಸುಧಾರಣೆಯಲ್ಲಿ ತೊಡಗುವ ಯಾರಿಗೂ ಬಸವಣ್ಣ ನವರ ಜೀವನದ ಆದರ್ಶ ದೊಡ್ಡ ದೀಪಸ್ತಂಭವಾಗಿದೆ. ಸಾಮಾಜಿಕ ರೀತಿ, ನೀತಿ ನಡಾವಳಿಯ ಬಗೆಗೆ ಅವರು ಆಡಿದ ಮಾತುಗಳನ್ನು ನೀಡಿದ ಸಂಸ್ಕಾರವನ್ನೂ ಅವರ ವಚನಗಳು ತವನಿಧಿಯಂತೆ ಕಾಪಾಡಿಕೊಂಡಿವೆ.

ಸಮಾಜದಲ್ಲಿ ಬೇರುಬಿಟ್ಟಿದ್ದ ಅಸ್ಪೃಶ್ಯತೆಯನ್ನು ಹೋಗಲಾಡಿಸುವಲ್ಲಿ ಬಸವಣ್ಣ ನವರು ಸಲ್ಲಿಸಿದ ಕಾಣಿಕೆಯನ್ನು ಇಲ್ಲಿ ಪ್ರತ್ಯೇಕವಾಗಿಯೇ ಪರಿಶೀಲಿಸಬಹುದು. ಇಂದಿಗೂ ಈ ಸಮಸ್ಯೆ ಸಂಪೂರ್ಣ ಬಗೆಹರಿದಿಲ್ಲವೆಂದಮೇಲೆ ಅದರ ಪ್ರಚಂಡತೆಯು ಮನವರಿಕೆಯಾಗದಿರದು ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಸಾಕಷ್ಟು ಉಪದೇಶ ಮಾಡಬಹುದು. ಆ ಬಗ್ಗೆ ಮಾತನಾಡಬಹುದು. ಬರೆಯಬಹುದು. ಆದರೆ ಅದನ್ನು ಕೃತಿಯಿಂದ ಮಾಡಿ ತೋರಿಸುವುದು ಕಠಿಣವಾಗಿದೆಯೆಂಬುದನ್ನು ಎಲ್ಲರೂ ಬಲ್ಲರು. ಈ ತತ್ವವನ್ನು ಹೊಗಳುವವರೇ ತಮ್ಮ ಮೈಮೇಲೆ ಆ ಪ್ರಸಂಗ ಬಂದಾಗ ಹಿಂಜರಿಯುವುದುಂಟು. ಇದೇ ಕಾರ್ಯಕ್ಕೆ ಕೈಹಾಕಿದಾಗ ಮಹಾತ್ಮ ಗಾಂಧಿಯ ವರಿಗೆ ಎಷ್ಟೊಂದು ವಿರೋಧ ಕಾದುಕೊಂಡಿತ್ತು ಅದಕ್ಕಾಗಿ ಅವರು ಎಷ್ಟು ಸಲ ಉಪವಾಸ ಮಾಡಿ ವಿರೋಧಿಗಳ ಮನಸ್ಸನ್ನು ಪರಿವರ್ತಿಸಬೇಕಾಯಿತು, ಎಂಬುದನ್ನು ಇಂದು ಅನೇಕರು ಬಲ್ಲರು. ಹಿಂದೂ ಧರ್ಮಕ್ಕೆ ಇದೊಂದು ದೊಡ್ಡ ಕಳಂಕವಲ್ಲದೆ ಇದರ ನಿರ್ಮೂಲನವು ಇಂದು ದೊಡ್ಡ ಸಮಸ್ಯೆಯೇ ಆಗಿರುವುದನ್ನು ಯಾರೂ ಅಲ್ಲಗಳೆಯಲಾರರು. ಬಸವಣ್ಣನವರು ಈಗ್ಗೆ ಎಂಟುನೂರು ವರ್ಷಗಳ ಹಿಂದೆಯೇ ಧೈರ್ಯ ಸಾಹಸಗಳಿಂದ ಅಂತ್ಯಜರನ್ನು ಅಂತಃಕರಣದಿಂದ ಅಪ್ಪಿಕೊಂಡದ್ದಲ್ಲದೆ ಅವರನ್ನು ತನಗಿಂತಲೂ ಶ್ರೇಷ್ಠರೆಂದು ಭಾವಿಸಿ ಕಾಲ ಪರಿಸ್ಥಿತಿಯನ್ನು ಎದುರಿಸಿ ನಿಂತು ಸಿದ್ಧಿಯ ಹಂತಕ್ಕೆ ತಲುಪಿದ್ದು ನಮ್ಮ ದೇಶದ ಇತಿಹಾಸದಲ್ಲಿಯೇ ಅಪ್ರತಿಮ ಸನ್ನಿವೇಶವಾಗಿದೆ.

## ಅಸ್ಪೃಶ್ಯತಾ ವಿರೋಧ

ಜಾತಿಕುಲಗಳ ಮೇಲಿಂದ ವ್ಯಕ್ತಿಯ ಮೇಲುಕೀಳುಗಳನ್ನು ಎಣಿಸುವುದು ತಪ್ಪು

ಎಂಬುದನ್ನು ಮನಗಂಡ ಬಸವಣ್ಣನವರು ಗುಣಕ್ಕೆ ಗೌರವವನ್ನು ನೀಡಿದರು. ಹಿಂಸೆಯನ್ನು ಮಾಡುವವರು, ಹೊಲಸು ತಿನ್ನುವವರು ಊರೊಳಗೇ ಎಷ್ಟು ಜನರಿಲ್ಲ? ನಿಜವಾದ ಕುಲಜರಾರೆಂಬುದನ್ನು ಅವರು ಸ್ಪಷ್ಟವಾಗಿ ತೋರಿದರು.

ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ
ಕುಲವೇನೋ, ಅವಂದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು.

ಸ್ಪೃಶ್ಯಾಸ್ಪೃಶ್ಯ ಭಾವನೆಯನ್ನೂ, ಉಚ್ಚ–ನೀಚ ಕಲ್ಪನೆಯನ್ನೂ ತಮ್ಮ ಮನ ಸ್ಸಿನಿಂದ ಸಂಪೂರ್ಣವಾಗಿ ತೆಗೆದೊಗೆದ ಬಸವಣ್ಣನವರ ಮನೋಧರ್ಮ ಅತ್ಯಂತ ಪವಿತ್ರವಾದದ್ದು. ತಾವು ಹುಟ್ಟಿನಿಂದ ಶ್ರೇಷ್ಠ ಎಂಬ ಭಾವನೆ ಅಕಸ್ಮಾತ್ತಾಗಿ ಸುಳಿ ದರೂ ಅದನ್ನು ಕೂಡಲೆ ದೂರಗೊಳಿಸಿ ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತ ನದ ಹೊರೆಯ ಹೊರಿಸದಿರಯ್ಯ ಎಂದು ಚಿತ್ತಸಮತೆಯನ್ನು ಕಾಯ್ದುಕೊಳ್ಳುತ್ತಿ ದ್ದರು. ಹೊಲೆಯರು ಮಾದಿಗರು ಡೋಹರರು ಮುಂತಾದ ಅಸ್ಪೃಶ್ಯರನ್ನು ವೀರಶೈವ ಸಮಾಜದಲ್ಲಿ ಸೇರಿಸಿಕೊಂಡು ಅವರನ್ನು ಹಿರಿಯಸ್ಥಾನದಲ್ಲಿ ಕುಳ್ಳಿರಿಸಿ ಅವರೊ ಡನೆ ಊಟ ಮಾಡುತ್ತಿದ್ದುದಲ್ಲದೆ ಶರೀರ ಸಂಬಂಧಕ್ಕೂ ಸಿದ್ಧರಿದ್ದರೆಂಬುದು ತಿಳಿ ಯುತ್ತದೆ. ಈ ವಿಷಯವನ್ನು ಅತ್ಯಂತ ಬಿಚ್ಚುಮನಸ್ಸಿನಿಂದ ತಮ್ಮ ವಚನಗಳಲ್ಲಿ ಸೂಚಿಸಿದ್ದಾರೆ ಅದರಲ್ಲಿ ಎಳ್ಳುಕಾಳಿನಷ್ಟೂ ಸಂಶಯಕ್ಕೆಡೆಯಿಲ್ಲ.

ದೇವ, ದೇವಾ, ಬಿನ್ನಪವನವಧಾರು:
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನೆಲ್ಲರನೊಂದೇ ಎಂಬೆ:
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವರನೊಂದೇ ಎಂಬೆ;

ಅವರ ಮನಸ್ಸು ಹೀಗೆ ನಂಬಿ ಈ ನುಡಿಯಲ್ಲಿ ಎಳ್ಳ ಮೊನೆಯಷ್ಟು ಸಂದೇಹ ವಿದ್ದರೆ ಹಲುದೋರಿ ಮುಗಕೋಯಿ ಎಂದು ಅವರು ಆತ್ಮಸಾಕ್ಷಿಯಾಗಿ ಕೂಡಲ ಸಂಗಮ ದೇವನಲ್ಲಿ ಪ್ರಾರ್ಥಿಸುತ್ತಾರೆ. ಸಂಬೋಳಿ ನಾಗಿದೇವನೆಂಬ ಹರಿಜನ ಶಿವ ಭಕ್ತನ ಮನೆಯಲ್ಲಿ ಪ್ರಸಾದ ಸ್ವೀಕರಿಸಿ ಬಂದುದಕ್ಕೆ ಸಂಪ್ರದಾಯವಾದಿಗಳು ವರ್ಣಾ ಶ್ರಮ ಧರ್ಮ ಹಾಳಾಯಿತೆಂದು ಬೊಬ್ಬಿಟ್ಟರು. ಅರಸನಾದ ಬಿಜ್ಜಳನಿಗೂ ಇದು ಮನಸ್ಸಿಗೆ ಬರಲಿಲ್ಲ. ಬಸವಣ್ಣನವರಿಗೆ ಅತಿಭಕ್ತಿ ತಲೆಗೇರಿ ಹೀಗೆ ವರ್ತಿಸುತ್ತಾರೆಂದೇ ಅವರೆಲ್ಲ ಕೋಪಗೊಂಡಿದ್ದರು. ಶಿವಭಕ್ತರು ಹೊಲೆಯರಲ್ಲವೆಂಬುದನ್ನು ಬಸವಣ್ಣ ನವರು ಅವರಿಗೆ ಮನಗಾಣಿಸಿಕೊಟ್ಟರು.

ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಇಬ್ಬರನ್ನು ಬಸವಣ್ಣನವ ಹಾಡಿ ಹರಸಿದ್ದಾರೆ 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನ ಡೋಹರ ಕಕ್ಕಯ್ಯ' ಎಂದು ಕಕ್ಕುಲಾತಿಯಿಂದ ಆಡಿರುವುದಲ್ಲದೆ 'ಅಯ್ಯಗಳಯ್ಯ ನಮ್ಮ ಮಾದಾರ ಚೆನ್ನಯ್ಯನು ಎಂದು ಅಪಾರವಾದ ವಾತ್ಸಲ್ಯ ತೋರಿದ್ದಾ ಅಂತ್ಯಜರ ಬಗ್ಗೆ ಅವರಿಗಿರುವ ಆತ್ಮೀಯತೆ, ಕರುಣೆ ಹೀಗೆ ಹಲವಾರು ವಚನಗ ಮೇರೆವರಿದಿದೆ, ಚನ್ನಯ್ಯ ಹಾಗೂ ಕಕ್ಕಯ್ಯ-ಅವರ ಮನೆಯ ದಾಸ ದಾಸಿಯ ತಾವು ಹುಟ್ಟಿದವರು ಎಂದು ಹೇಳಿಕೊಳ್ಳುವಷ್ಟು ಅವರು ದೂರ ಹೋಗಿದ್ದಾ 'ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ' ಎಂದು ಅವರು ಕುಣಿದಾಡಿವ ಸ್ಪೃಶ್ಯರಿಗಿಂತ ಅಸ್ಪೃಶ್ಯರನ್ನೇ ಅವರು ತಮ್ಮ ವಚನಗಳಲ್ಲಿ ಹೆಚ್ಚಾಗಿ ಕೊಂಡಾಡಿ ವುದು ಕಂಡುಬರುತ್ತದೆ. ಇವರೆಲ್ಲರೂ ಭಕ್ತಿ ಭಿಕ್ಷೆಯ ನೀಡಿದ್ದರಿಂದಲೇ ತಮ ಹೃದಯ ಪಾತ್ರೆ ತುಂಬಿತ್ತೆಂದು ಅವರು ಸಂತಸಗೊಂಡಿದ್ದಾರೆ.

ಆವ ಕುಲವಾದರೇನು ? ಶಿವಲಿಂಗವಿದ್ದವನೇ ಕುಲಜನು,
ಕುಲವನರಸುವರೆ ಶರಣರಲ್ಲಿ ಜಾತಿ ಸಂಕರನಾದ ಬಳಿಕ ?
ಒಕ್ಕುದ-ಕೊಂಬೆನವರಲ್ಲಿ, ಕೂಸ ಕೊಡುವೆ

ಎಂದಿರುವುದರಿಂದ ಅಸ್ಪೃಶ್ಯರೊಡನೆ ಊಟ ಉಪಚಾರಗಳನ್ನೂ ನಡೆ ತ್ತಿದ್ದುದೇ ಅಲ್ಲದೆ. ಅವರೊಡನೆ ಶರೀರ ಸಂಬಂಧ ಮಾಡುವುದಕ್ಕೂ ಸಿದ್ಧರಿದ್ದುದ ಗೊತ್ತಾಗುತ್ತದೆ ಹೊಲೆಯರನ್ನು ಮುಟ್ಟಿದರೆ ಮೈಲಿಗೆಯಾಗುತ್ತದೆಂಬ ಕಲ್ಪ ಕುಂತೂ ಬಸವಣ್ಣನವರ ಕಾಲದ ವೀರಶೈವ ಸಮಾಜದಲ್ಲಿ ಇದ್ದಿರಲೇ ಇಲ್ಲವೆಂದ ಹೇಳಬಹುದು. ಹೊಲಗೇರಿಯನ್ನು 'ಹಿರಿಯ ಮಾಹೇಶ್ವರರ ಕೇರಿ' ಎಂ ಬಸವಣ್ಣನವರು ಭಾವಿಸಿದ್ದರು.

**ಸಮಾನತೆಗೆ ಹೋರಾಟ :-** ಬಸವಣ್ಣನವರು ಅಸ್ಪೃಶ್ಯರನ್ನು ಯಾವ ಕ ತೆಯಿಂದ ಕಂಡು ತಮಗಿಂತ ಅಧಿಕರೆಂದು ಭಾವಿಸಿ ನಡೆದುಕೊಂಡರೊ ಅಷ್ಟೇ ಭಕ್ತಿ ವಿನಯಗಳಿಂದ ಅಸ್ಪೃಶ್ಯರು ಅವರೊಡನೆ ನಡೆದುಕೊಂಡುದು ಮಹತ್ವದ್ದಾಗಿದೆ ತಮ ದೊರೆತ ಈ ಸ್ವಾತಂತ್ರ್ಯವನ್ನು ಅವರು ದುಪ್ಪ್ರಯೋಗ ಮಾಡದೆ ಅದಕ್ಕೆ ತಕ್ಕ ವಾಗಿ ನಡೆದುಕೊಂಡರು. 'ಕಕ್ಕಯ್ಯ, ಹರಿಯಯ್ಯ, ಚಿಕ್ಕಯ್ಯ, ಚೆನ್ನಯ್ಯ, ಎ ಮುದ್ದಾಡಿ ಸಲಹಿದರೆನ್ನ' ಎಂದು ಬಸವಣ್ಣನವರು ಅವರ ಬಗ್ಗೆ ಪ್ರೀತಿಯ ಮಳೆಗ ರಿದ್ದಾರೆ. ಹರಳಯ ನನ್ನು ಕುಲತಿಲಕನೆಂದು ಭಾವಿಸಿದ ಬಸವಣ್ಣನವರು ತಾನು ಅವನ ಕೆರವುಗಳಿಗೂ ಸಮಾನನಲ್ಲವೆಂದು ತಿಳಿದು ಅವನು ತಂದ ಚಮ್ಮಾವುಗೆ ಳನ್ನೂ ಮೆಟ್ಟದೆ ಹಿಂದಕ್ಕೆ ಕಳುಹಿಸಿದ್ದನ್ನು ನೋಡಿದರೆ ಬಸವಣ್ಣ ತಾನು ಭಕ್ತ ಅಸ್ಪೃಶ್ಯನಾದ ಹರಳಯ್ಯನೇ ಮಾಹೇಶನೆಂದು ವರ್ಣಿಸಿದಂತಾಗಿದೆ. ಹರ ಳಯ್ಯನ ಹೆಂಡತಿಯಾದ ಕಲ್ಯಾಣಮ್ಮನನ್ನು ಅನುಭವ ಮಂಟಪಕ್ಕೆ ಬರಮಾಡಿಕೊಂಡ

ಶಿವಶರಣೆಯರು ಅವಳನ್ನು ಸತ್ಕರಿಸಿದ ರೀತಿಯನ್ನೂ, ಮಹಾದೇವಿಯಕ್ಕ, ಸತ್ಯಕ್ಕ, ಸೋಮವ್ವೆ, ರೆಮ್ಮವ್ವೆ ಮುಂತಾದವರು ಅಲ್ಲಿ ಪಡೆದ ಸಮಾನ ಸ್ಥಾನಮಾನಗಳನ್ನೂ ಇಲ್ಲಿ ನೆನೆಯ ಬಹುದು.

ಇವೆಲ್ಲ ಘಟನೆಗಳಿಗೂ ಶಿಖರಪ್ರಾಯವಾದದು ಹರಳಯ್ಯ ಮಧುವಯ್ಯ ಶರೀರ ಸಂಬಂಧ. ಇಬ್ಬರೂ ಶಿವಭಕ್ತರೆ. ಹರಳಯ್ಯ ಹರಿಜನ ಕುಲದವನು; ಮಧುವಯ್ಯ ಬ್ರಾಹ್ಮಣ, ಮಧುವಯ್ಯ ತನ್ನ ಮಗಳನ್ನು ಹರಳಯ್ಯನ ಮಗನಿಗೆ ಕೊಡಲು ಸಿದ್ಧನಾದ. ಇದಕ್ಕೆ ಬಸವಣ್ಣನವರ ಸಂಪೂರ್ಣ ಸಮ್ಮತಿ ಇದ್ದಿತು. ಈ ಸಂಗತಿ ಇತರ ಮತೀಯರಲ್ಲಿ ದೊಡ್ಡ ಕೋಲಾಹಲವನ್ನೇ ಎಬ್ಬಿಸಿತು. ಬಿಜ್ಜಳನು ಪೂರ್ವಾಪರಗಳನ್ನು ವಿಚಾರಿಸದೆ ಹರಳಯ್ಯ ಮಧುವಯ್ಯಗಳ ಕಣ್ಣುಗಳನ್ನೇ ಕೀಳಿಸಿಬಿಟ್ಟ. ಇದೇ ಘಟನೆ ಕಾರಣವಾಗಿ ಬಿಜ್ಜಳನ ಕೊಲೆಯಾಯಿತು. ಚಾಲುಕ್ಯ ರಾಜ್ಯ ಕೊನೆಗೊಂಡಿತು. ಬಸವಣ್ಣನವರು ಕಪ್ಪಡಿ ಸಂಗಮಕ್ಕೂ ಚೆನ್ನಬಸವಣ್ಣ, ಮಡಿವಾಳ ಮಾಚಿದೇವಿ ಮುಂತಾದವರು ಉಳಿವೆಯ ಕಡೆಗೂ, ಶರಣರಂದೊಂದು ಭಾಗ ಶ್ರೀಶೈಲ್ಯಕ್ಕೂ ತೆರಳಿತು. ಅಸ್ಪೃಶ್ಯತೆಯ ನಿವಾರಣೆಯ ಸಮಸ್ಯೆ ಎಷ್ಟೊಂದು ಭೀಕರವಾಗಿದೆ ಎಂಬುದರ ಕಲ್ಪನೆ ಇದರಿಂದ ಬರಬಹುದಾಗಿದೆ. ಆದರೆ ಎಂಥ ಪ್ರಸಂಗ ಬಂದರೂ ಬಸವಣ್ಣ, ಹರಳಯ್ಯ, ಮಧುವಯ್ಯ ಇವರು ಹಿಂಜರಿಯದೆ ತಮ್ಮ ತತ್ವಕ್ಕಾಗಿ ಮಾಡಿದ ತ್ಯಾಗ ಅಪಾರವಾದ ಬಸವಣ್ಣನವರು ಪ್ರೇರಣೆಯಂತೆಯೇ ಹರಳಯ್ಯ, ಮಧುವಯ್ಯಗಳಲ್ಲಿ ಕಂಡು ಬಂದ ಧೈರ್ಯಸಾಹಸಗಳೂ ಅಷ್ಟೇ ಪ್ರಶಂಸನೀಯವಾಗಿದೆ ತಮ್ಮ ಈ ಕಾರ್ಯಕ್ಕೆ ಅವರು ಅರಸನೆದರು ಎಂದೂ ಪಶ್ಚಾತ್ತಾಪ ಪಡದೆ ತಾವು ನಂಬಿದ ತತ್ವಕ್ಕಾಗಿ ಪ್ರಾಣಗಳನ್ನೇ ಬಲಿಯಾಗಿ ಕೊಟ್ಟರು. ಇಷ್ಟೇ ಅಲ್ಲದೆ ಇಡಿಯ ವೀರಶೈವ ಸಮಾಜವೇ ಅನೇಕ ಕಷ್ಟನಷ್ಟಗಳನ್ನನುಭವಿಸಿಯೂ ಅವರ ಬೆಂಬಲಕ್ಕೆ ನಿಂತು ಗಮನಾರ್ಹವಾಗಿದೆ.

ಹೊಲೆಯರಾದರೇನು; ಮಾದಿಗರಾದರೇನು ಭಕ್ತರಾದ ಅವರ ಮಹಿಮೆಯನ್ನು ಕೊಂಡಾಡಿ ಕುಣಿದಾಡಿದ ಬಸವಣ್ಣನವರ ಭಾವ್ಯತೀವ್ರತೆಯ ನುಡಿ ಇಂದಿಗೂ ನಮ್ಮ ಕಿವಿಗವಿಗಳಲ್ಲಿ ಪ್ರತಿಧ್ವನಿಗೈಯುತ್ತಿದೆ.

ಹೊಲೆಯ ಮಾದಿಗ ಭಕ್ತನಾದರೆ
ಆತನ ಮನೆಯ ಸೊಣಗಂಗೆ
ಪಂಚ ಮಹಾವಾದ್ಯದಲ್ಲಿ ಸನ್ಮಾನನೆಂತು ಮಾಡಿನೆ ?
ನೇಲನಸು ಹಿಡಿಪ ಫೇ, ಚಾಂಗು ಭಲತೆ' ಎಂದು
ಕುಲದಲಧಿಕ ಹ ಮಂಗೆ ಸಿದ್ಧಿಗೆಯ್ಯೆಪಳೆ !
ನಿಮ್ಮ ಶರಣ ಹುಮೆ ಘನಕ್ಕೆ ಘನ !
ಎಲೆ ಕೂಡಲ ಮದೇವಾ, ನಿಮ್ಮನ್ನ ಸಂಬಂಧವ ಹೊಲೆಯ !

# ನಾ ಮೆಚ್ಚಿದ "ಸಿದ್ಧಗಂಗಾ ಶ್ರೀ"

—ಜಿ. ನಾರಾಯಣ್

ಮಠದ ಸ್ವಾಮಿಗಳನ್ನು ಕುರಿತ ನನ್ನ ಕಲ್ಪನೆಯೇ ಬೇರೆ. ಈ ಸ್ವಾಮಿಗಳು ಒಂದು ನಿರ್ದಿಷ್ಟ ಕಾರ್ಯನಿರ್ವಹಣೆಗಾಗಿ ಸನ್ಯಾಸವನ್ನು ಸ್ವೀಕರಿಸಬೇಕು, ಸ್ವೀಕರಿಸುತ್ತಾರೆ ಎನ್ನುವುದು ನನ್ನ ಅನಿಸಿಕೆ. ಅವರದು ಧರ್ಮದೃಷ್ಟಿ. ಧರ್ಮವನ್ನು ಆಚರಿಸಬೇಕು. ಧರ್ಮವನ್ನು ಬೋಧಿಸಬೇಕು. ಈ ಧರ್ಮ ಬೋಧನೆ ಜನೋಪಯೋಗಕ್ಕೆ, ಲೋಕೋದ್ಧಾರಕ್ಕೆ ಧರ್ಮದ ಗುರಿ ಒಂದೇ ಆದರೂ ಅದನ್ನು ಪ್ರತಿಪಾದಿಸುವ ಮಾರ್ಗಗಳು ಬೇರೆ ಬೇರೆ. ಅದಕ್ಕಾಗಿ ನಮ್ಮಲ್ಲಿ ನೂರೆಂಟು ಧರ್ಮಗಳು ಬೆಳೆದಿವೆ. ಒಬ್ಬರೇ ಆಚಾರ್ಯರು, ಆರಾಧ್ಯರು ಪ್ರತಿಪಾದಿಸಿದ ಧರ್ಮಗಳಲ್ಲಿ ಹಲವೆಂಟು ಪಂಗಡಗಳು ರೂಪುಗೊಂಡಿವೆ. ಎಲ್ಲವೂ ತಮ್ಮದೇ ಶ್ರೇಷ್ಠ ಎಂದು ಸಾರ್ಥಕ ದೃಷ್ಟಿಯಿಂದ ತುಂಬಿ ಭಿನ್ನ ಮತಗಳನ್ನು ಭಿನ್ನ ಸಂಪ್ರದಾಯಗಳನ್ನು ಬೆಳೆಸಿ, ಧರ್ಮ ಮೂಲಗುರಿಯತ್ತ ಸಾಗದೆ ದಾರಿತಪ್ಪಿ ನಡೆಯುತ್ತಿರುವಂತೆ ಕಾಣುತ್ತದೆ. ಇಂಥ ಕಲುಷಿತ ಧರ್ಮಕ್ಷೇತ್ರದಲ್ಲಿ ನೆಲಸಿ ಲೋಕೋದ್ಧಾರ ಮಾಡಲು ಹೊರಟಿರುವ ಮಠದ ಸ್ವಾಮಿಗಳ ಬಗ್ಗೆ ನನ್ನ ಕಲ್ಪನೆ ಸ್ವಲ್ಪ ಬೇರೆಯಾದುದೇ.

ಮಠಗಳು ಜನಜೀವನವನ್ನು ಸನ್ಮಾರ್ಗಕ್ಕೆ ಎಳೆಯುವ ದಾರಿದೀಪಗಳಾಗಿರಬೇಕೆಂಬುದು ನನ್ನ ಭಾವನೆ. ಆ ಮಠದ ನೇತಾರರು ಆ ಬೆಳಕ ಹತ್ತು ಕಡೆಗೆ ಬೀರುವ ಕಾರಣ ಪುರುಷರು ತಾವು ದೀಕ್ಷೆ ಪಡೆದ ಧರ್ಮವನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು. ಅದರ ತಿರುಳನ್ನು ಅರಗಿಸಿಕೊಳ್ಳಬೇಕು. ಅದರ ಅಜೇಯ ಶಕ್ತಿಯ ಬೆಂಬಲದಿಂದ ತಮ್ಮ ಕಾರ್ಯ ಸಾಧನೆಯನ್ನು ಕೈಗೂಡಿಸಿಕೊಳ್ಳಬೇಕು. ಮತ್ತು ತಮ್ಮ ಗುರಿಯ ಕಡೆ ಚಂಚಲ ಚಿತ್ತರಾಗದೆ ತಾವು ಬದುಕುವ ದಾರಿಯ ಆಮಿಷಗಳಿಗೆ ಒಳಗಾಗದೆ ಏಕಚಿತ್ತರಾಗಿ, ಏಕಪ್ರಕಾರವಾಗಿ ಸಾಗಬೇಕು. ಸನ್ಯಾಸ ಎನ್ನುವುದು ಸ್ವಾರ್ಥತಲಗದ ಒಂದು ಪ್ರಮುಖ ಗುಣ. ಈ ಸ್ವಾರ್ಥ ತನಗಾಗಲಿ ತನ್ನ ಪೂರ್ವಾಶ್ರಮದ ಕುಟುಂಬಕ್ಕಾಗಲಿ, ತನ್ನ ಬಂಧುಗಳಿಗಾಗಲಿ ಅಥವಾ ತನ್ನ ಮಠದ ಲೌಕಿಕ ಪ್ರಯೋಜನಕ್ಕಾಗಲಿ ಅನ್ವಯಿಸಿರಬಾರದು. ಆದರೆ ಅವರು ಅದನ್ನು ಸಂಪೂರ್ಣವಾಗಿ ನಿರ್ವ್ಯಾಜವಾಗಿ ತ್ಯಾಗಮಾಡಿರಬೇಕು. ಅಂಥ ಸಂದರ್ಭದಲ್ಲಿ ಮಾತ್ರ ಮಠದ ಸ್ವಾಮಿಗಳು ತಮ್ಮ ಗುರಿಯತ್ತ ನಿಶ್ಚಲದೃಷ್ಟಿ ಬೀರಬಹುದು.

ಹೀಗ ಏಕೈಕ ಗುರಿಯನ್ನು ಸಾಧಿಸಲು ಹೊರಟ ಸ್ವಾಮಿಗಳು ನಮ್ಮಲ್ಲಿ ಎಷ್ಟು ಜನ ಇದ್ದಾರೆ. ಇಂದು ಅನೇಕಮಠಗಳು ಧರ್ಮದ ಹೆಸರಿನಲ್ಲಿ ವ್ಯಾಪಾರ ಕೇಂದ್ರಗಳಾಗಿವೆ; ರಾಜಕೀಯ ಶಾಲೆಗಳಾಗಿವೆ; ಸ್ವಸುಖಮಂದಿರಗಳಾಗಿವೆ; ಆ ಪಾತ್ರದಲ್ಲಿ ಪ್ರಭಾವ ಬೀರುವ ಶಕ್ತಿಮೂಲಗಳಾಗಿವೆ. ಮತ್ತೀಯ ಶೋಷಣಾನೆಲೆಗಳಾಗಿವೆ. ಸಂಪತ್ತು ಶೇಖರಣೆಯ ಉಗ್ರಾಣಗಳಾಗಿವೆ. ಇಂಥ ಮಠಗಳ ಅಧೀಶ್ವರರು, ತಾವು ಸನ್ಯಾಸ ಸ್ವೀಕರಿಸಿದ ಗುರಿಯನ್ನು ಅರ್ಥಮಾಡಿಕೊಂಡು ಸಾಧಿಸದಿದ್ದರೆ, ಧರ್ಮವನ್ನು ಒಳ್ಳೆಯ ಬುನಾದಿಯ ಮೇಲೆ ಸ್ಥಾಪಿಸಲು ಹೇಗೆ ಸಾಧ್ಯ? ಲೋಕ ಕಲ್ಯಾಣವನ್ನು ಸಾಧಿಸುವುದಾದರೂ ಹೇಗೆ? ಅವರಿರುವುದು ವ್ಯಕ್ತಿಯ ಪ್ರಯೋಜನಕ್ಕಾಗಿ ಅಲ್ಲ. ಸಮಷ್ಟಿಯ ಉದ್ಧಾರಕ್ಕಾಗಿ. ಆ ಮೂಲಕ ಲೋಕದ ಏಳಿಗೆಗಾಗಿ ಎಂದು ಬೇರೆ ಹೇಳಬೇಕಾಗಿಲ್ಲ.

ಸನ್ಯಾಸಿಗಳು ಒಂದು ರೀತಿಯಲ್ಲಿ ತಪಸ್ವಿಗಳಾದರೂ ಮತ್ತೊಂದು ದೃಷ್ಟಿಯಲ್ಲಿ ಕರ್ತವ್ಯಶೀಲರು. ಅದರಲ್ಲೂ ವಿಶೇಷವಾಗಿ ವೀರಶೈವ ಸಮಾಜದಲ್ಲಿ "ಕಾಯಕವೇ ಕೈಲಾಸ" ಎಂಬ ಧ್ಯೇಯವುಳ್ಳ ಧರ್ಮಕ್ಷೇತ್ರದಲ್ಲಿ ಕರ್ತವ್ಯ ಪ್ರಜ್ಞೆ ಹೆಚ್ಚಿನದು. ಇದು ಸನ್ಯಾಸಿಗಳನ್ನೂ ಬಿಡುವುದಿಲ್ಲ. ಆ ಸನ್ಯಾಸಿಗಳು ಮಠದ ಒಡೆಯರಾದರಂತೂ ಅವರ ಜವಾಬ್ದಾರಿ ಇನ್ನೂ ಹೆಚ್ಚಿನದು. ಇದನ್ನು ಅರಿತ ಸ್ವಾಮಿಗಳು ನಮ್ಮಲ್ಲಿ ಎಷ್ಟು ಜನ ಸಿಗುತ್ತಾರೆ? ಈ ಜವಾಬ್ದಾರಿಯನ್ನು ಅರಿತ ಸನ್ಯಾಸಿಗಳಲ್ಲಿ ಸಿದ್ಧಗಂಗೆಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಒಬ್ಬರು ಎಂದು ನಾನು ಅರಿತಿದ್ದೇನೆ.

ಈ ಹಿರಿಯರು ಈಗ ವೃದ್ಧರಾಗಿದ್ದಾರೆ. ವಯೋವೃದ್ಧರೂ, ಜ್ಞಾನವೃದ್ಧರೂ ಆದ ಈ ಮಹಾಸ್ವಾಮಿಗಳು ನಡೆದುಬಂದ ಹಾದಿ ವಿಶಿಷ್ಟವಾದುದು. ಇಂದಿನ ಆ ಮಠದ ಕಾರ್ಯವ್ಯಾಪ್ತಿಗೆ ಅವರ ನಿರ್ವಾಜ್ಯ ಸೇವೆ, ದುಡಿಮೆ ಎಷ್ಟರಮಟ್ಟಿಗೆ ಅಡಿಪಾಯವಾಗಿದೆ ಎಂದರೆ ಅವುಗಳನ್ನು ಎಳೆ ಎಳೆಯಾಗಿ ವಿವರಿಸಿ ಹೇಳಿದರೂ ವರ್ಣನೆ ಪೂರ್ಣವಾಗಲಾರದು. ಸ್ವಾಮಿಗಳು ಸುಮಾರು ಚಿಕ್ಕ ವಯಸ್ಸಿನಲ್ಲಿಯೇ ಸಿದ್ಧಗಂಗಾ ಮಠದ ಹೊಣೆಯನ್ನು ಸನ್ಯಾಸಿಗಳಾಗಿ ವಹಿಸಿಕೊಂಡರು. ಅಂದಿನಿಂದ ಇಂದಿನವರೆಗೆ ಅವರ ಬದುಕಿನ ಚರಿತ್ರೆ ಮಠದ ಬಾಳಿನ ಚರಿತ್ರೆಯೊಂದಿಗೆ ಹಾಸುಹೊಕ್ಕಾಗಿ ಸೇರಿಕೊಂಡಿದೆ.

ಸ್ವಾಮಿಗಳು ಬಹುಶ್ರುತ ವಿದ್ವಾಂಸರು ಇಂಗ್ಲಿಷು, ಸಂಸ್ಕೃತ, ಕನ್ನಡ ಭಾಷೆಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಪ್ರವೀಣರಾಗಿದ್ದಾರೆ. ಅವರು ಭಾಷಣಮಾಡಲು ಆರಂಭಿಸಿದರೆ ಅವುಗಳಲ್ಲಿ ಹೆಚ್ಚಿನ ಭಾಗ ಹಿರಿಯ ದ್ರಷ್ಟಾರರ, ಕವಿಗಳ ಮಾತುಗಳು ಉದಾಹೃತವಾಗಿರುತ್ತವೆ. ಇಂಗ್ಲಿಷ್ ಭಾಷೆಯ ಕವಿಗಳ, ದಾರ್ಶನಿಕರ, ವೇದಾಂತಿ

ಗಳ ಮಾತುಗಳಂತೂ ಅವರಿಗೆ ಮುಖೋದ್ಗತ, ಉದ್ಧೃತಭಾಗಗಳು ಪುಂಖಾ
ಪುಂಖವಾಗಿ ಬರುತ್ತವೆ. ಹಾಗೆಯೇ ಸಂಸ್ಕೃತ ಕನ್ನಡದ ದಾರ್ಶನಿಕರ, ಅನುಭಾ
ಗಳ, ವಚನಕಾರರ ಅಭಿಪ್ರಾಯಗಳೂ ಅವರಿಗೆ ಕರಗತ. ಈ 'ಹೇಳಿಕೆ'ಗಳು ಭಾಷ
ವನ್ನು ಅಲಂಕಾರಮಯವನ್ನಾಗಿ, ಆಕರ್ಷಣೀಯವನ್ನಾಗಿ ಮಾಡುವುದಕ್ಕಲ್ಲ. ತಾ
ಓದಿ, ಅರಗಿಸಿಕೊಂಡು ಅನುಭವಿಸಿದ್ದನ್ನು ತನ್ನ ಒಪ್ಪಿಗೆಯಿಂದ ಎಲ್ಲ ಹಿರಿಯರ ಅ
ಭಾವಿಗಳ ಅಭಿಪ್ರಾಯ ಹೇಗೆ ಒಮ್ಮತವಾಗಿದೆ ಎಂದು ತೋರಿಸಿಕೊಡುವುದಕ್ಕಾಗಿ
ಅಧ್ಯಯನ ಭಾಷಣಕ್ಕಾಗಿ ಅಲ್ಲ, ಜೀವನಮಾರ್ಗದಲ್ಲಿ ಪ್ರಯೋಗಕ್ಕೆ ಎನ್ನುವುದು ಅವ
ವಾದ. ಹಿಂದಿನ ಸಾಧಕರ ಅನುಭವೈಕ ವೇದ್ಯವಾದ ಬೋಧನೆಗಳನ್ನು ಆಚರಣೆ
ತರುವ, ಅವರ ಸಾಹಸ ಆಶ್ಚರ್ಯಕರವಾದುದು. ಮಠ ಇರುವುದು ಸಮಾಜದ
ಮಾನವವರ್ಗದ ಉದ್ಧಾರಕ್ಕೆ ಈ ಮಾನವ ವರ್ಗದಲ್ಲಿ ಮಕ್ಕಳು, ಮಹಿಳೆಯರು
ಪುರುಷರು ವಯಸ್ಕರು ಇದ್ದಾರೆ. ಇವರೆಲ್ಲರ ಉದ್ಧಾರವಾಗಬೇಕು. ಎಲ್ಲರನ್ನು
ಅಧ್ಯಾತ್ಮ ಮಾರ್ಗಾವಲಂಬಿಗಳಾಗಿ ಮಾಡಲು ಸಾಧ್ಯವಿಲ್ಲ. 'ಆಚಾರಃ ಪರಮೋ
ಧರ್ಮಃ' ಎಂಬ ಒಂದು ಸೂಕ್ತಿ ಸಮಾಜದ ನಡತೆ, ನಡವಳಿಗೆ ಸಂಬಂಧಿಸಿದ್ದು. ವಿಶೇ
ಷವಾಗಿ ಲೌಕಿಕ ಬದುಕಿಗೆ ಅನ್ವಯಿಸತಕ್ಕದ್ದು. ಇದನ್ನು ಗೃಹಸ್ಥರಿಗೆ ತಿಳಿಸಬೇಕು
ಬೋಧನೆ ಎಷ್ಟೋ ವೇಳೆ ಉಪದೇಶ ಸ್ವರೂಪವನ್ನು ತಾಳಿ ಗೋರ್ಕಲ್ಲ ಮೇಲೆ ಮ
ಸುರಿದಂತೆ ಆಗುತ್ತದೆ. ಆದರೆ ಆ ಮಾರ್ಗವನ್ನು ಬಿಡುವಂತೆಯೂ ಇಲ್ಲ ಸಮಾಜದ
ಇಂಥ ಸದಸ್ಯರಿಗೆ 'ತಿಳಿಯ ಹೇಳುವ' ಕ್ರಮ ಪರಿಣಾಮಕಾರಿಯದಾಗಿದ್ದಿರಬೇಕು
ಸ್ವಾಮಿಗಳು ಇವರೊಡನೆ ಬೆರೆತು ಇವರ ನಡೆನುಡಿಯ ಮುಖಾಂತರವೇ ಅವರಿಗೆ ತಿಳಿ
ಕೊಡಬೇಕು. ಸಂಸಾರಿಗಳೊಂದಿಗೆ ಸ್ನೇಹಪರರಾಗಿ ಬೆರೆತು, ತಮಗೆ ಸಂಸಾರದ
ಯಾವ ಮಮತೆ ಮೋಹಗಳೂ ಅಂಟದಂತೆ ವ್ರತಧರಿಸಬೇಕು. ಸನ್ಯಾಸಿಯಾಗಿ ದೂ
ನಿಲ್ಲದೆ ಅನತಿದೂರದಲ್ಲೇ ಇದ್ದುಕೊಂಡು ಅವರನ್ನು ಸನ್ಮಾರ್ಗಿಗಳಾಗಿ ಮಾಡುವ
ಹೊಣೆಯನ್ನು ಹೊತ್ತ ಮೇಧಾವಿಗಳು ನಮ್ಮ ಈ ಸ್ವಾಮಿಗಳು.

ಮಠಗಳು ಸಾಮಾನ್ಯವಾಗಿ ವಿದ್ಯಾಕೇಂದ್ರಗಳು ಆಗುವುದು ಸಹಜ. ಆಧುನಿಕ
ಕಾಲದಲ್ಲಿ ಈ ವಿದ್ಯಾಕೇಂದ್ರಗಳೆಂದರೆ ಮಠದಲ್ಲಿಯೇ ವಿದ್ಯಾಭ್ಯಾಸ ಏರ್ಪಡುವುದು
ಎಂದಲ್ಲ. ಶಾಲೆಗಳನ್ನೂ, ಪಾಠಶಾಲೆಗಳನ್ನೂ ಸ್ಥಾಪಿಸಿ ಅವುಗಳನ್ನು ಬೆಳೆಸುವುದು.
ವ್ಯವಸ್ಥಾಪನೆ ಮಾತ್ರ ಮಠಕ್ಕೆ ಸೇರಿದ್ದು, ಸಿದ್ಧಗಂಗಾ ಮಠದಲ್ಲಿ ಸಂಸ್ಕೃತ ಪಾಠಶಾಲೆ
ಹುಟ್ಟಿ ಬೆಳೆದದ್ದು ಒಂದು ವಿಶೇಷ. ಸಂಸ್ಕೃತವನ್ನು ಕಲಿಯುವವರದೇ ಒಂದು ವರ್ಗ
ಎಂಬ ಅಭಿಪ್ರಾಯವಿದ್ದ ಕಾಲದಲ್ಲಿ ತಮ್ಮ ಮಠದ ಆಶ್ರಯದಲ್ಲಿ ಸಂಸ್ಕೃತವನ್ನು ಜಾತಿ,
ಮತ ಧರ್ಮಾತೀತವಾಗಿ ಸಂಸ್ಕೃತ, ಸಾಹಿತ್ಯ, ಶಾಸ್ತ್ರ, ವೇದಾಂತಗಳನ್ನು ಕಲಿಸಲು
ಏರ್ಪಡಿಸಿದರು. ಬಡವಿದ್ಯಾರ್ಥಿಗಳಿಗೆ ಆರ್ಥಿಕ ಸಹಾಯ ಒದಗಿಸಿದರು ಶಾಲೆಯಲ್ಲಿ
ಏಕಾಗ್ರತೆಯಿಂದ ಕಲಿಯಲು ಊಟವಸತಿಗಳ ಏರ್ಪಾಟನ್ನೂ ಒದಗಿಸುವ ವಿದ್ಯಾರ್ಥಿ

ನಿಲಯಗಳನ್ನು ಸ್ಥಾಪಿಸಿದರು. ಹಿಂದಿನ ಕಾಲದ ವಿದ್ಯಾಭ್ಯಾಸ ಪದ್ಧತಿಯಂತೆ ಈ ಮಕ್ಕಳಿಗೆ 'ಗುರುಕುಲವಾಸ'ವೆಂಬ ಭಾವನೆ ಬರುವಂತೆ ಮಾಡಿದರು. ಎಂದರೆ ತಂದೆ ತಾಯಿಗಳಿಂದ ದೂರವಿದ್ದು ವಿದ್ಯಾರ್ಜನೆಯಲ್ಲಿಯೇ ಮನಸ್ಸಿಡುವಂತೆ ಮಾಡುವ ಪ್ರಯತ್ನದಲ್ಲಿ ಯಶಸ್ವಿಯಾದರು. 'ಸಂಸ್ಕೃತಪಾಠಶಾಲೆ' ಅವರ ಬಯಕೆ ಮತ್ತು ಸಾಧನೆ.

ಸಂಸ್ಕೃತ ವಿದ್ಯೆ ಲೌಕಿಕಕ್ಕೆ ಕಡಿಮೆ. ಅದನ್ನು ಕಲಿತು ಪದವಿ ಪಡೆದರೂ ಉದ್ಯೋಗಾವಕಾಶ ದುರ್ಲಭ. ನಾಗರೀಕ ಯುಗದಲ್ಲಿ ಬದುಕುವ ಜನಕ್ಕೆ ಸಂಸ್ಕೃತ ಕಲಿಕೆ ಒಂದು ಹವ್ಯಾಸವಾಗಬಹುದಷ್ಟೆ. ಆದರೆ ಜೀವನೋಪಾಯವಾಗುವುದಿಲ್ಲ. ಇದನ್ನು ಬಲ್ಲ ಶ್ರೀಯವರು ಕಾಲಕ್ಕೆ ತಕ್ಕಂತೆ ನಡೆಯಲೇಬೇಕಾಯಿತು. ಸಮಾಜ ಸರ್ಕಾರ ಒಪ್ಪಿದ ಶಿಕ್ಷಣ ಪದ್ಧತಿಯನ್ನೂ ಜಾರಿಗೆ ತಂದರು. ಶಾಲಾ ಕಾಲೇಜುಗಳನ್ನು ಸ್ಥಾಪಿಸಿದರು. ಈಗ ಅವರು ಹುಟ್ಟು ಹಾಕಿದ ವಿದ್ಯಾಕೇಂದ್ರ ಒಂದು ಸಣ್ಣ ವಿಶ್ವ ವಿದ್ಯಾನಿಲಯವೇ ಆಗಿದೆ. ಆ ವಾತಾವರಣದ ಮಧ್ಯ ಆಗೊಮ್ಮೆ ಈಗೊಮ್ಮೆ ಸುಳಿದಾಡುವ ಈ ಪೂಜ್ಯರು ಅದರ ಅಂತಃ ಶ್ಚೇತನವಾಗಿ ಸ್ಫೂರ್ತಿಯ ಸೆಲೆಯಾಗಿ ಕಾಣಿಸುತ್ತದೆ.

ಈ ಬೃಹತ್ ಸಂಸ್ಥೆಯನ್ನು ಕಟ್ಟಿದ ಅವರ ಸಾಮರ್ಥ್ಯ ಎಂಥದು ? ಅದಕ್ಕೆ ಮೂಲತಃ ಅಗತ್ಯವಾದ ಹಣದ ಸಂಗ್ರಹ ಹೇಗೆ ? ಸಾಮಾನ್ಯವಾಗಿ ಹಣವನ್ನು ಕೂಡಿಸುವ ವಿಧಾನವೆಂದರೆ ಧರ್ಮದ, ದೇವರ ಹೆಸರಿನಲ್ಲಿ ಪಡೆಯುವ ಪತ್ತಿ ದಾನಗಳು. ಹೀಗೆ ದಾನಗಳನ್ನು ಉದಾರವಾಗಿ ನೀಡುವ ಧರ್ಮಬುದ್ಧಿಯ ಶ್ರೀಮಂತರು ನಮ್ಮಲ್ಲಿ ಎಷ್ಟು ಜನರಿರಬಹುದು. ಆದರೂ ಅವರಿಂದಲೂ ಅಲ್ಪ ಸ್ವಲ್ಪ ಪಡೆಯುವುದು ಸಾಮಾನ್ಯ ವಿಧಾನ. ನಮ್ಮ ಈ ಸ್ವಾಮಿಗಳು ಬಳಸಿದ ವಿಧಾನ ಅಪೂರ್ವವೂ, ಜಾಣತನದಿಂದ ಕೂಡಿದ್ದೂ ಆಶ್ಚರ್ಯಕರವಾದುದೂ ಆಗಿದೆ. ಹೇಳಿ ಕೇಳಿ ಇವರು ಮಠದ ಸ್ವಾಮಿಗಳು. ಈ ಮಠ ಸಾಧಾರಣಕ್ಕಿಂತ ದೊಡ್ಡದು. ಇದಕ್ಕೆ ಅನೇಕ ವರ್ಷಗಳ ಚರಿತ್ರೆಯಿದ್ದು ಒಂದು ಮಹತ್ವವೂ ಬಂದಿದೆ. ಇಲ್ಲದಿದ್ದರೆ ಆ ಮಹತ್ವವನ್ನು ಸಂಪಾದಿಸಿಕೊಡುವ ಉದ್ದೇಶವಾದರೂ ಸ್ವಾಮಿಗಳಿಗೆ ಇದೆ. ಈ ಮಹತ್ವ ಸಂಪಾದನೆಗೆ ಸ್ವಾಮಿಗಳ ಆಚರಣೆ, ದಿನಚರಿ ಮುಖ್ಯ. ಅವರು ವಿದ್ಯಾವಂತರಾಗುವುದರ ಜೊತೆಗೆ, ಪೂಜಾವಂತರೂ ಆಗಬೇಕು. ಶಿವನ ಪೂಜೆಯು ನಿಷ್ಠೆ ಶಿಸ್ತಿನಿಂದ ಕೂಡಿರಬೇಕು, ಭಕ್ತಿಯಿಂದ ತುಂಬಿರಬೇಕು. ತಪಸ್ಸಿನ ಶ್ರದ್ಧೆಯೂ ಅವಶ್ಯಕವಾಗಿರಬೇಕು. ಅಷ್ಟಕ್ಕೆಲ್ಲ ದಿನದ ಬಹುಭಾಗವನ್ನು ಮೀಸಲಿಟ್ಟರೆ ಜನಕ್ಕೆ ಸಂದರ್ಶನ ನೀಡುವುದು ಯಾವಾಗ ? ಸ್ವಾಮಿಗಳು ಒಂದು ಉಪಾಯ ಮಾಡಿದರು. ಪ್ರತಿದಿನ ಗೊತ್ತಾದ ಒಂದು ಹೊತ್ತು ಸ್ವಲ್ಪ ಅವಧಿಯವರಿಗೆ ತಾವು ಸಾರ್ವಜನಿಕರನ್ನು, ಭಕ್ತಾದಿಗಳನ್ನು ಸಂದರ್ಶಿಸುತ್ತೇವೆ

ಅದು ಮೌನಸಂದರ್ಶನ ಮಾತ್ರ. ಅಲ್ಲಿ ಮಾತು ಕಥೆಯಿಲ್ಲ. ವಿಚಾರ ದೋಹದವಿಲ್ಲ. ಯೋಗಕ್ಷೇಮ ವಿನಿಮಯವಿಲ್ಲ. ಬರಿಯ ಸಂದರ್ಶನ. ಭಕ್ತಾದಿಗಳು ಸ್ವಾಮಿಗಳನ್ನು ಕಾಣಬಹುದು; ತಮ್ಮ ಭಕ್ತಿ ಕಾಣಿಕೆಯನ್ನು ಸಮರ್ಪಿಸಬಹುದು ಎಂದು ದಿನಚರಿ ಹಾಕಿಕೊಂಡರು. ಅದರಂತೆ ನಡೆದು ಕೊಂಡರು ಸ್ವಾಮಿಗಳನ್ನು ಆ ವಿಶಿಷ್ಟ ಹೊತ್ತಿನಲ್ಲಿ ನೋಡಲು ಬಂದ ಭಕ್ತ ಸಮೋಹ ಬರಿಯ ಕೈಯಲ್ಲಿ ಬರುತ್ತಾರೆಯೆ ? ತಮಗೆ ಭಾರವಾಗದ ಅಲ್ಪ ಸ್ವಲ್ಪ ಕಿರುಕಾಣಿಕೆಯಿಂದ ಸ್ವಲ್ಪ ಸೇವೆಸಲ್ಲಿಸುತ್ತಿದ್ದರು. ಈ ಕಾಣಿಕೆಯ ಸಂಗ್ರಹವೇ ಅವರ ಸಂಪನ್ಮೂಲವಾಯಿತು. ಸನ್ಯಾಸಿಗಳ ಲೌಕಿಕ ಕಾರ್ಯಕ್ಕೆ ಅವರು ಕೈಕೊಂಡ ಒಂದು ಕಾರ್ಯಚಟುವಟಿಕೆ. ಇದರಿಂದ ಅವರ ಕೀರ್ತಿ ಬೆಳೆಯಿತು. ಅವರ ಮಹತ್ವ ಪ್ರಸಾರವಾಯಿತು. ತಮ್ಮ ಗುರಿ ಸಾಧನೆಗೆ ಆರ್ಥಿಕ ಅಡಿಪಾಯ ಭದ್ರವಾಗತೊಡಗಿತು. ಈ ಕಾರ್ಯವಿಧಾನ ಲೌಕಿಕವಾದರೂ ಅವರು ಅಂಟು ಅವರಿಗಿಲ್ಲ. ಏಕೆಂದರೆ ಈ ಸಂಪಾದನೆಯ ವಿಲೇವಾರಿ ಆ ಭಕ್ತ ಜನಕ್ಕೆ ಇನ್ನೊಂದು ರೀತಿಯಲ್ಲಿ ಹಿಂದಿರುಗಿಸುವ ಉದ್ದೇಶ ಅವರದು. ಅದು ವಿದ್ಯಾದಾನ, ಜ್ಞಾನದಾನ.

ಸಾಮಾನ್ಯವಾಗಿ ಕೆಲವು ಮಠದ ಸ್ವಾಮಿಗಳಲ್ಲಿ ಕಂಡುಬರದ ಇನ್ನೊಂದು ವಿಶೇಷ ಇವರಲ್ಲುಂಟು. ಸ್ವಾಮಿಗಳ ಜ್ಞಾನಪ್ರವಾಹದ ಮುಖವೆಂದರೆ ಸಂಸ್ಕೃತ. ಕನ್ನಡ ಸಾಹಿತ್ಯಸಂಪತ್ತಿನಲ್ಲೂ ವೇದಾಂತ ಮತ್ತು ಲೌಕಿಕ ಜ್ಞಾನದ ನೆಲೆಗಳಿವೆ. ಆದರೂ ಅವುಗಳಿಗೆ ಮೂಲ ಸಂಸ್ಕೃತ- ಆ ಭಾಷೆಯ, ಆ ಭಾಷೆಯಲ್ಲಿನ ಗ್ರಂಥಗಳ ಅಭ್ಯಾಸ ಅಧ್ಯಯನ ಅನಿವಾರ್ಯ ಆದ್ದರಿಂದ ಮ್ಲೇಚ್ಛ ಭಾಷೆಯಾದ ಇಂಗ್ಲಿಷನ್ನು ಸ್ವಾಮಿಗಳು ಓದುತ್ತಾರೆ ಎಂದರೆ ಅದು ಆಶ್ಚರ್ಯ. ಅಷ್ಟೇ ಅಲ್ಲ ಮೈಲಿಗೆ ಆದರೆ ನಮ್ಮ ಸ್ವಾಮಿಗಳು ಲೌಕಿಕದಿಂದ ದೂರ ಇರಲು ಇಷ್ಟಪಟ್ಟವರೇ ಅಲ್ಲ. ಅವರ ಸೇವೆ ಲೌಕಿಕ ಜನಕ್ಕೆ ಆ ಜನ ಅನುಸರಿಸುವ ಜಾಡನ್ನೆ ತಾವು ಹಿಡಿದು ಅವರ ಜೊತೆಯಲ್ಲಿ ನಡೆಯದಿದ್ದರೆ ತಾವು ಅವರಿಗಿಂತ ತುಂಬ ದೂರ ಎಂಬ ಭಾವನೆ ಬಂದುಬಿಡುತ್ತದೆ. ಅವರಿಗೆ ಲೌಕಿಕದ ಸಂಪರ್ಕ ಅಂಟದ ಅಂಟು. ಅಲ್ಲದೆ ಆಧುನಿಕ ಕಾಲದಲ್ಲಿ ಇಂಗ್ಲಿಷ್ ಜ್ಞಾನವನ್ನು ಪಡೆಯದ ಯಾವ ವಿದ್ವಾಂಸನೂ ವಿದ್ವಾಂಸನೇ ಅಲ್ಲ. ಇಂಗ್ಲಿಷ್ ತಿಳಿಯದ ಪಂಡಿತ ವ್ಯಕ್ತಿ ನಮ್ಮ ನಾಗರಿಕ ಸಾಮಾಜದಲ್ಲಿ ಗೌರವಕ್ಕೆ ಪಾತ್ರವೇ ಅಲ್ಲ. ಸನ್ಯಾಸಿಗಳಿಗೆ ಇಂಗ್ಲಿಷ್ ಮೈಲಿಗೆ ಆದರೂ ನಾಗರಿಕ ವಿದ್ವಾಂಸರಿಗೆ ಅದು ಮಡಿ. ಸ್ವಾಮಿಗಳು ನಾಗರಿಕ ಸಮಾಜದ ಗುರುಗಳು ಹೌದು. ಇಂಗ್ಲಿಷ್ ಕಲಿತರು, ಆಳವಾಗಿ ಅಭ್ಯಾಸ ಮಾಡಿದರು. ಮೇಧಾವಿಗಳ, ಕವಿಗಳ, ದಾರ್ಶನಿಕರ ತತ್ವಬೋಧನೆಗಳನ್ನು ಮನನ ಮಾಡಿದರು ಮಾಡಿದ್ದನ್ನು ನೆನಪಿನಲ್ಲಿಟ್ಟುಕೊಂಡರು. ತಮ್ಮ ಉಪನ್ಯಾಸಗಳಲ್ಲಿ ಬೋಧನೆಗಳಲ್ಲಿ ಅವ್ಯಹತವಾಗಿ ಬಳಸಿದರು ದೃಷ್ಟಾಂತವಾಗಿ ತೋರಿಸಿಕೊಟ್ಟರು. ನಮ್ಮ ಸ್ವಾಮಿಗಳು ಇಂಗ್ಲಿಷ್‌ನಲ್ಲೂ ಮಾತನಾಡುತ್ತಾರೆ ಎಂದು ಜನ ಮೂಗಿನಮೇಲೆ ಬೆರಳಿಟ್ಟರು, ಅವರಲ್ಲಿ ನಂಬಿಕೆ ಗೌರವವನ್ನು ಹೆಚ್ಚು ಹೆಚ್ಚಾಗಿ ಬೆಳಸಿಕೊಂಡರು.

ಈ ಕಲಿಕೆಯಿಂದ ತಮ್ಮ ಪುರಾತನ ಪೂಜಾ, ಮತ್ತು ತಪಸ್ಸಿನ ವಿಧಾನಗಳನ್ನು ಆಧುನೀಕರಣ ಮಾಡಿಕೊಳ್ಳಲಿಲ್ಲ. ತಪೋಭೂಮಿಯೇ ಬೇರೆ, ಕರ್ಮ ಕ್ಷೇತ್ರವೇ ಬೇರೆ, ತಪೋಭೂಮಿಯಲ್ಲಿ ಸಾಧಿಸಿದ್ದನ್ನು ಕರ್ಮ ಕ್ಷೇತ್ರದಲ್ಲಿ ಬಿತ್ತಿಬೆಳೆದರು.

ಇಂಗ್ಲೀಷನ್ನು ಕಾವ್ಯ ತತ್ವಾಭ್ಯಾಸಗಳಿಗೆ ಮಾತ್ರ ಮೀಸಲಿಡಲಿಲ್ಲ ಅವರು. ಕನ್ನಡ ಪತ್ರಿಕೆಗಳನ್ನು ಓದುವಂತೆಯೇ ಇಂಗ್ಲಿಷ್ ಪತ್ರಿಕೆಗಳನ್ನು ಓದುವ ಹವ್ಯಾಸವನ್ನು ಬೆಳಸಿಕೊಂಡರು. ಈ ಹವ್ಯಾಸದ ಮುಖ್ಯ ಮತ್ತು ಮೂಲ ಉದ್ದೇಶ ಸಮಕಾಲೀನ ಲೌಕಿಕ ಪರಿಸ್ಥಿತಿಯನ್ನು ಪರಿಚಯಮಾಡಿಕೊಳ್ಳುವುದು. ಇಲ್ಲಿಯೂ ಅಷ್ಟೆ ತಾವು ಎಲ್ಲವನ್ನೂ ತ್ಯಜಿಸಿದ ಮಠದ ಸ್ವಾಮಿಗಳಾದರೂ ತಾವು ಬದುಕಿರುವುದು ಇಂದಿನ ಸಮಾಜದಲ್ಲಿ, ತಾವು ಸಲ್ಲಿಸುತ್ತಿರುವ ಸೇವೆ ತಮ್ಮ ಜೊತೆಯಲ್ಲಿ ತಮ್ಮ ಕಣ್ಣ ಮುಂದೆ ಇರುವ ಜನಕ್ಕೆ ಅವರ ಬದುಕಿನ ಬಗೆ ಹೇಗೆ, ಅವರ ಬದುಕಿನ ಬೆಲೆ ಯಾವ ಪ್ರಮಾಣದ್ದು ಎಂಬುದನ್ನು ತಿಳಿಯದೆ ಈ ಸೇವೆ ಹೇಗೆ ಸಾರ್ಥಕವಾದೀತು ಎನ್ನುವುದು ಇದರಿಂದ ಅವರು ನಮ್ಮ ಸಮಾಜದ ಜೊತೆಜೊತೆ ಬೆಳೆಯುವ, ನಡೆಯುವ ದೃಷ್ಟಿಯನ್ನು ಬೆಳಸಿಕೊಂಡರು ಲೌಕಿಕದಿಂದ ದೂರ ಉಳಿಯಲಿಲ್ಲ. ಸಾಮಾನ್ಯವಾಗಿ ನಾವು ಕಂಡಂತೆ ಅನೇಕ ಮಠದ ನೇತಾರರು ಇಂದಿನ ರಾಜಕೀಯದಲ್ಲಿ ಸಕ್ರಿಯ ಪಾತ್ರವನ್ನು ವಹಿಸುತ್ತಿದ್ದಾರೆ. ಚುನಾವಣೆಯ ಕಾಲದಲ್ಲಂತೂ ಮಠಗಳ ಪ್ರಭಾವ ತೀವ್ರತರವಾಗಿ ಕಂಡುಬರುತ್ತದೆ. ಆದರೆ ಸಿದ್ಧಗಂಗಾ ಶ್ರೀ ಅವರ ಸೇವಾಕ್ಷೇತ್ರ ರಾಜಕೀಯದಿಂದ ದೂರವಾದ ಮಾನವನ ಬದುಕು. ಅಸೂಯೆ, ಅಧಿಕಾರ. ಸ್ವಾರ್ಥ, ಅಹಂಕಾರ, ಆರ್ಥಿಕ ಪಿಪಾಸೆಗಳಿಂದ ತುಂಬಿದ ರಾಜಕೀಯ ಕ್ಷೇತ್ರ ಅವರ ಪಾಲಿಗೆ ಇಲ್ಲ ವಿದ್ಯಾರ್ಜನೆ, ಸನ್ನಡತೆ ನೀತಿಸಂಪನ್ನ ಬದುಕು, ಸುಖಜೀವನ, ಪರಹಿತ ಚಿಂತನೆ ಇವುಗಳ ಸಾಧನೆ ಅವರ ಗುರಿ. ದಿನಪತ್ರಿಕೆ ಇಂಗ್ಲೀಷನದ್ದಾಗಲಿ ಕನ್ನಡದ್ದಾಗಲಿ ಅವರು ಓದುವುದು ವ್ರತಭಂಗಕ್ಕಲ್ಲ, ವ್ರತಸಾಧನೆಗೆ. ಹೀಗೆ ಶ್ರೀಗಳವರು ಧರ್ಮರಕ್ಷಣೆಯ ದೀಕ್ಷೆಯನ್ನು ತೊಟ್ಟು, ಆ ಧರ್ಮ ಮಾನವ ಕೋಟಿಯಲ್ಲಿ ಹೇಗೆ ಮೂಡಿಬರಬೇಕು, ಅದಕ್ಕೆ ಮಠಾಧೀಶರು ಸ್ವಾಮಿಗಳು, ಯತಿಗಳು, ಸನ್ಯಾಸಿಗಳು ಕೈಕೊಳ್ಳುವ ಮಾರ್ಗಗಳೇನು ಎಂಬುದನ್ನು ಕಾಲಕ್ಕನುಗುಣವಾಗಿ ವ್ಯಾವಹಾರಿಕವಾಗಿ ಯೋಚಿಸುವ, ಯೋಚಿಸಿ ಕಾರ್ಯರೂಪಕ್ಕೆ ತರುವ ಧೀರ ಸ್ವಾಮಿಗಳು ನಮ್ಮ ಶ್ರೀ ಶಿವಕುಮಾರ ಸ್ವಾಮಿಗಳು.

ಅವರು ಸನ್ಯಾಸ ಸ್ವೀಕರಿಸಿದಾಗ ಮಠದ ಸ್ಥಿತಿ ಇಂದು ಅದು ಹರಡಿಕೊಂಡಿರುವ ವ್ಯಾಪ್ತಿಯನ್ನು ಗಮನಿಸಿದವರಿಗೆ ಅವರ ಸಾಹಸದ ಪ್ರಮಾಣ ಅರ್ಥವಾಗುತ್ತದೆ. ತಾವು ಸನ್ಯಾಸ ತೆಗೆದುಕೊಂಡ ಶೈಶವದಲ್ಲಿ ಇದ್ದ ಉತ್ಸಾಹವೇ ಈ ವಯಸ್ಸಿನಲ್ಲೂ ಅಚ್ಚಳಿಯದೆ ನಿಂತಿದೆ. ದೇಹದಲ್ಲಿ ವಯಸ್ಸಿನ ಶೈಥಿಲ್ಯ ಕಂಡರೂ ಮನಸ್ಸಿನಲ್ಲಿ

(25ನೇ ಪುಟ ನೋಡಿ)

# ಅಭಿನವ ಋಷಿವರ್ಯ ಆಚಾರ್ಯ

# ಕಾಕಾ ಕಾಲೇಲ್ಕರ್

—ಎ. ಹೆಚ್

ಭಾರತ ಮಾತೆಯ ಗರ್ಭದಲ್ಲಿ ಅಗಣಿತ ವಿಭೂತಿ ಪುರುಷರು ಜನ್ಮತಾ
ಭಾರತದ ಉನ್ನತಿಗೆ ತಮ್ಮ ತನು-ಮನ-ಧನಗಳನ್ನು ತ್ಯಾಗಮಾಡಿದ್ದಾರೆ. ತಮ
ಸರ್ವಸ್ವವನ್ನೂ ದೇಶಕ್ಕಾಗಿ ಮುಡುಪಿಟ್ಟು ರಾಷ್ಟ್ರ ಸೇವೆಯೇ ಈಶ ಸೇವೆ ಎಂದು ನಂ
ಕಾಯ, ವಾಚ, ಮನಸಾ ತ್ರಿಕರ್ಣ ಶುದ್ಧಿಯಿಂದ ಶತವರುಷಗಳ ತನಕ ಬಾಳಿದ ಒ
ಮಹಾನ್ ದೇಶಪ್ರೇಮಿ ಎನಿಸಿಕೊಂಡಿದ್ದ ಆಚಾರ್ಯಕಾಕಾ ಕಾಲೇಲ್ಕರ್ ರವರ
ದಿನಾಂಕ 21-8-81 ನೇ ಶುಕ್ರವಾರದ ಶುಭದಿನದಂದು ಪರಲೋಕ ಯಾತ್ರೆಯನ
ಮಾಡಿದರು. ಇಂತಹ ದೇಸಪ್ರೇಮಿಯ ಬಗ್ಗೆ ಶ್ರದ್ಧಾಂಜಲಿಯನ್ನು ಅರ್ಪಿಸುವುದ
ನಮ್ಮ ಕರ್ತವ್ಯವಾಗಿದೆ. ಮಹಾತ್ಮಗಾಂಧೀಜಿಯವರು ಚಾಚೂ ಜ್ಞಾನಮಾರ್ಗದ
ತಪ್ಪದೆ ನಡೆಯುತ್ತಿದ್ದು ಇತರರಿಗೂ ಮಾರ್ಗದರ್ಶಿಯಾಗಿದ್ದ ಮಹಾನುಭಾ
ಕಾಕಾರವರು ಇನ್ನಿಲ್ಲ ವಾಗಿದ್ದಾರೆ.

ಕಾಕಾ ಸಾಹೇಬರ ಪೂರ್ಣ ಹೆಸರು ದತ್ತಾತ್ರೇಯ ಬಾಲಕೃಷ್ಣ ಕಾಲೇಲ್ಕರ
ಮಹಾತ್ಮಾಜಿಯವರನ್ನು ಬಾಪು (ತಂದೆ) ಎಂದು ಸಂಬೋಧಿಸುತ್ತಿದ್ದರೆ, ಅವ
ಅತ್ಯಂತ ಸಮೀಪವರ್ತಿ, ಮತ್ತು ಮನಮೆಚ್ಚಿನ ಶಿಷ್ಯರಾಗಿದ್ದುದರಿಂದ ಪಂಡಿ
ಜವಾಹರಲಾಲರಿಗೆ "ಚಾಚ ನೆಹರು" ಎಂದು ಕರೆದರೆ ಇವರನ್ನು "ಕಾಕ" ಎಂದ
ಎಲ್ಲರೂ ಆದರ ಪೂರ್ವಕವಾಗಿ ಆತ್ಮೀಯವಾಗಿ ಸಂಬೋಧಿಸುತ್ತಿದ್ದರು. ಇವರ
ಮಹಾತ್ಮಾಗಾಂಧಿಯವರ ಅನನ್ಯ ಭಕ್ತರು. ಬಾಪೂರವರ ಮಾತಿನ ಪ್ರತಿಯೊಂದ
ಅರ್ಥವನ್ನು ತಿಳಿದು ನಡೆಯುತ್ತಿದ್ದ ಆಜ್ಞಾರಾಧಕರಾಗಿದ್ದರು, ಕಟ್ಟು ನಿಟ್ಟ
ಸಮಯಪಾಲನೆ, ಕರ್ತವ್ಯನಿಷ್ಠೆ, ಸತ್ಯಪ್ರಿಯತೆ, ಸರಳ ಜೀವನದ ದ್ಯೋತಕರಾಗಿದ್ದರು
ಕಾರ್ಯತಹ ಮಾಡಿ ತೋರಿಸುತ್ತಿದ್ದ ಪರಮ ಶ್ರೇಷ್ಠ ಕರ್ಮಯೋಗಿ ಕಾಕಾ
ಸಾಹೇಬರು.

ಆಚಾರ್ಯ ವಿನೋಬಾ ಭಾವೆಯವರು ಕಾಕಾರವರ ಬಗ್ಗೆ ಒಂದು ಕ
ಹೀಗೆಂದಿದ್ದಾರೆ, "ಕಾಲೇಲ್ಕರ್‌ಜೀಯವರು ಶಬ್ದವಿದ್ಯಾಪ್ರವೀಣರು, ಅಸಮಾ
ಪ್ರವಚನಕಾರರು, ಸರ್ವೋದಯ ಸಮ್ಮೇಳನವಾಗಲಿ, ಹಿಂದಿ ಸಾಹಿತ್ಯ ಸಮ್ಮೇಳ

ವಾಗಲಿ, ಹರಿಜನಗೋಷ್ಠಿಯಾಗಲಿ ಕಾಕಾರವರ ಪ್ರವಚನ ಭಾವಪೂರ್ಣ. ಕೇಳುವವರು ಮುಗ್ಧರಾಗುತ್ತಿದ್ದರು". ಅವರ ಪ್ರತಿಭೆ ಬಹುಮುಖವಾದದ್ದು. ಓಜಪೂರ್ಣಶಾಂತ, ಸೌಮ್ಯ, ಭಾಷಣಕಾರರಾಗಿದ್ದರು. ತಮ್ಮ ತೇಜಸ್ವೀ ವ್ಯಕ್ತಿತ್ವ ಎಲ್ಲರನ್ನೂ ಆಕರ್ಷಿಸುತ್ತಿತ್ತು. ಅವರ ಓಜಸ್ವೀವಾಣಿಯಲ್ಲಿ ಒಂದು ಅದ್ಭುತವಾದ ಶಕ್ತಿ ಇದ್ದುದರಿಂದಲೇ ಪ್ರತಿಯೊಬ್ಬರೂ ಸಹಜವಾಗಿಯೇ ಮೋಹಿತರಾಗುತ್ತಿದ್ದರು.

ಕಾಕಾ ಕಾಲೇಲ್ಕರ್‌ರವರು ಬಹುಭಾಷಾವಿಶಾರದರು, ಅವರಿಗೆ ಅನೇಕ ಭಾಷೆಗಳಲ್ಲಿ ಪಾಂಡಿತ್ಯವಿತ್ತು. ಕೊಂಕಣಿ, ಮರಾಠಿ, ಗುಜರಾತಿ, ಹಿಂದಿ ಮುಂತಾದ ಭಾಷೆಗಳ ವಿದ್ವಾಂಸರಾಗಿದ್ದರು. ನಮ್ಮ ನೆರೆ ರಾಜ್ಯವಾದ ಮಹಾರಾಷ್ಟ್ರದಲ್ಲಿ ಬಹಳ ದಿನಗಳ ಕಾಲ ಅವರ ಸೇವೆ ಮೀಸಲಾಗಿದ್ದುದರಿಂದ ಕನ್ನಡದ ಪ್ರಭಾವವೂ ಅವರ ಮೇಲೆ ಸಾಕಷ್ಟು ಬಿದ್ದಿತ್ತು.

ಗಾಂಧೀಜಿಯವರು ನಮ್ಮ ದೇಶದ ಮೂಲಭೂತ ಸಮಸ್ಯೆಗಳನ್ನು ಚೆನ್ನಾಗಿ ಅರಿತು, ಶೈಕ್ಷಣಿಕ ಕ್ಷೇತ್ರದಲ್ಲಿ ಅತ್ಯುತ್ತಮ ಕಾರ್ಯವನ್ನು ಮಾಡಿದ್ದರು. ಅದೆಂದರೆ ನಮ್ಮ ದೇಶಕ್ಕೆ ಹೊಂದುವ ಯೋಗ್ಯ ಶಿಕ್ಷಣ ಪದ್ಧತಿ ಎಂದರೆ ತಮ್ಮ ಜೀವನವನ್ನು ತಾವೇ ನಡೆಸುವಂತಾಗಲು ಪ್ರಯೋಗಪೂರ್ಣ ಶಿಕ್ಷಣ ಬೇಕೆಂದು ಅರಿತು " ನಯೀತಾಲೀಂ " ಎಂಬ ಒಂದು ಹೊಸ ಪದ್ಧತಿಯನ್ನು ಜಾರಿಗೆ ತಂದರು. ಅದನ್ನು ಕಾರ್ಯಗತ ಮಾಡಲು ಅವರ ಶಿಷ್ಯರಲ್ಲೇ ಅನೇಕರು ಹಿಂಜರಿದರು. ಆದರೆ ಕಾಕಾ ಕಾಲೇಲ್ಕರವರು ಮತ್ತು ನಮ್ಮ ಮಾಜಿ ರಾಷ್ಟ್ರಪತಿಗಳಾಗಿದ್ದ ಡಾ॥ ಜಾಕೀರ್‌ಹುಸೇನರು ಶ್ರದ್ಧೆಯಿಂದ ಮಾಡಿ ತೋರಿದ ಮಹಾವ್ಯಕ್ತಿಗಳು. ನಮ್ಮ ಜನತೆಯ ಬಡತನವನ್ನು ನೀಗಲು ಹಗಲು ಇರುಳು ದುಡಿದು ಗಾಂಧೀ ಪದಚಿನ್ಹೆಗಳಲ್ಲಿ ನಡೆದು ಬಂದ ಮಹಾವ್ಯಕ್ತಿ ಕಾಕಾರವರು.

---

(23ನೇ ಪುಟದಿಂದ)
ಆ ಹುರುಪು, ಆ ಉತ್ಸಾಹ ಆ ದಾರ್ಢ್ಯ ಕುಂದದೆ, ಕೃಶಿಸದೆ ಯಥಾವತ್ತಾಗಿಯೇ ಉಳಿದಿದೆ.

ಶ್ರೀಗಳವರಿಗೆ ಸನ್ಯಾಸ ಒಂದು ದೀಕ್ಷೆ. ಮಠದ ಹಿರಿತನದ ಸ್ಥಾನ, ಸಾರ್ವಜನಿಕ ಜನಜೀವನದ ಉತ್ತಮಿಕೆಗೆ ಸಿದ್ಧಪಡಿಸಿಕೊಂಡ ಒಂದು ವೇದಿಕೆ. ಅವರ ಉಸಿರು ಪರಿಮಳಯುಕ್ತವಾದ ಜನಸಂತೋಷದಾಯಕ ವಾತಾವರಣದಲ್ಲಿ ಸುಳಿದಾಡುವ ತಂಪಾದ ಹಿತವಾದ ಗಾಳಿ. ಅವರ ಕಾಯಕ ಆತ್ಮಸಾಧನೆಗಲ್ಲ ; ಪರಾರ್ಥಸಾಧನೆಗೆ ಅವರ ಬಾಳು ಜನದ ಬದುಕಿನ ಬೆಳಕು.

ನಾನು ಅವರನ್ನು ಮೆಚ್ಚಿಕೊಂಡ ಕಾರಣವಿಷ್ಟು.

ಭಾರತದಲ್ಲಿನ ಒಂದು ದೊಡ್ಡ ಪಿಡುಗೆಂದರೆ ಸಾವಿರಾರು ವರ್ಷಗಳಿಂದ ನಡೆದು ಬಂದಿರುವ ಜಾತಿ ಸಮಸ್ಯೆ. ಸ್ವಾತಂತ್ರ್ಯ ಬಂದ ನಂತರವೂ ಇದೊಂದು ಜ್ವಲಂತ ಸಮಸ್ಯೆಯಾಗಿ ಪರಿಣಮಿಸಿದೆ. ಉಚ್ಚ, ನೀಚ ಜಾತಿಭೇದಗಳನ್ನು ತೊಲಗಿಸಿ ಮಾನವ ಜಾತಿಯೆಲ್ಲಾ ಒಂದೇ ಭಗವಂತನ ಮಕ್ಕಳೆಂದು ತಿಳಿಸುವ ಹೊಣೆ ಗಾಂಧೀಜಿಯವರ ನಂತರ ಕಾಕಾರವರದ್ದೇ ಆಗಿತ್ತು. ಹರಿಜನ, ಗಿರಿಜನ ಮತ್ತು ಅಸ್ಪೃಶ್ಯತಾ ಭಾವನೆಗಳನ್ನು ಕಂಡು ಮರಗುತ್ತಿದ್ದರು. ಅದನ್ನು ದೂರಮಾಡಲು ತಮ್ಮ ಜೀವನವನ್ನೇ ತೇಯುತ್ತಿದ್ದರು.

ಕಾಕಾ ಕಾಲೇಲ್ಕರ್‌ರವರು ಸಾರಸ್ವತ ತಪಸ್ವಿಗಳಾಗಿದ್ದರು. ಭಾರತೀಯ ಸಾಂಸ್ಕೃತಿಕ ಪ್ರತೀಕಾತ್ಮಕಯೋಗಿಗಳು. ಜೀವನ ಅತ್ಯಂತ ಸರಳ. ನೀಳವಾದ ಗಡ್ಡ ಮೀಸೆಗಳು, ಕಣ್ಣಿಗೆ ಚಾಳೀಸು, ಉದ್ದವಾದ ನಿಲುವಂಗಿ, ಸ್ವಚ್ಛತೆಯ ಪ್ರತೀಕವನ್ನು ನೋಡಿದರೆ, ಠಾಗೋರಮಹಾತ್ಮ. ಟಾಲ್‌ಸ್ಟಾಯ್‌ರ ನೆನಪು ಬರುವಂತಿದ್ದರು, ಇಂತಹ ಆದರ್ಶ ತಪಸ್ವೀ ಆಚಾರ್ಯರ ಬದುಕು ಬಂಗಾರ, ದೇಶಕ್ಕೆ ಅಪಾರ ಸೇವೆ ಸಲ್ಲಿಸಿದ ಕೀರ್ತಿಶೇಷರು.

ಕಾಕಾರವರ ಜನ್ಮ 1885 ರಲ್ಲಿ ಆಗಿತ್ತು ಅವರ ಬಾಲ್ಯವೂ ಮಹತ್ತರವಾದದ್ದೇ. ಪೂನಾದ ಫರ್ಗ್ಯೂಸನ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ರಾಷ್ಟ್ರೀಯ ಚಳುವಳಿಗಳಲ್ಲಿ ಪ್ರವೇಶ. ಭಾರತ ಸ್ವಾತಂತ್ರ್ಯದ ಆಂದೋಳನಗಳಿಂದ ಬ್ರಿಟಿಷರು ಫರ್ಗ್ಯೂಸನ್ ಕಾಲೇಜನ್ನು ಮುಚ್ಚಿದರು. ಕಾರಣಾಂತರಗಳಿಂದ ಸ್ವಲ್ಪಕಾಲ ಕಾಕಾರವರು ಹಿಮಾಲಯಕ್ಕೆ ಹೊರಟರು. ಪರ್ವತೀಯ ಪವಿತ್ರ ಸ್ಥಳಗಳ ಸಾಕಷ್ಟು ಪರ್ಯಟನೆ ಮಾಡಿ ಅಪಾರ ಜ್ಞಾನ ಸಂಪಾದಿಸಿದರು. ಅದೇ ಸಂದರ್ಭದಲ್ಲಿ ಗುರುದೇವ ರಬೀಂದ್ರನಾಥ ಠಾಗೋರರ ದೃಷ್ಟಿ ಇವರ ಮೇಲೆ ಬಿತ್ತು. ಠಾಗೋರರ ನಿಯಂತ್ರಣವನ್ನು ಮನ್ನಿಸಿ ಶಾಂತಿನಿಕೇತನದಲ್ಲಿ ಅಧ್ಯಾಪನ ಕಾರ್ಯವನ್ನು ಕೈಕೊಂಡರು. ಅನೇಕ ವರ್ಷಗಳ ತನಕ ಅಲ್ಲಿನ ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿ ಕೀರ್ತಿಯನ್ನು ಗಳಿಸಿದರು. 1917 ರಲ್ಲಿ ಕಾಕಾಸಾಹೇಬರು ಸಬರಮತಿ ಆಶ್ರಮಕ್ಕೆ ಭೇಟಿ ಕೊಟ್ಟರು. ಅದು ಅವರ ಮತ್ತು ಗಾಂಧೀಜೀಯವರ ಪ್ರಪಥಮ ಹಾರ್ದಿಕ ಸಂಮಿಲನವಾಗಿತ್ತು. ಆ ಮಿಲನ ಶಾಶ್ವತ ಸ್ನೇಹದಲ್ಲಿ ಪರಿವರ್ತಿತ ಗೊಂಡಿತು.

1934 ರಲ್ಲಿ ಅವರು ಗುಜರಾತ್ ವಿದ್ಯಾಪೀಠದಲ್ಲಿ ಅಧ್ಯಾಪನ ಕಾರ್ಯದಲ್ಲಿ ತೊಡಗಿದರು. ಅಪೂರ್ವ ವಿದ್ಯಾದಾನದ ಆಚಾರ್ಯಪಟ್ಟ ಅವರದ್ದು. ನಂತರ ದೆಹಲಿಯ "ಹಿಂದೂಸ್ಥಾನೀ ಪ್ರಚಾರ ಸಭಾ" ದ ಸೇವೆಯಲ್ಲಿ ನಿರತರಾಗಿದ್ದರು.

1948 ರಲ್ಲಿ ಗಾಂಧೀಜಿಯವರ ಮೃತ್ಯುವಿನ ನಂತರ "ಗಾಂಧೀ ಸ್ಮೃತಿ" ಎಂಬ ಮಹತ್ಕಾರ್ಯ ಆರಂಭವಾಯಿತು. ಗಾಂಧೀ ಗ್ರಂಥಾಲಯದ ಸಂಚಾಲನೆ ಮತ್ತು ಗಾಂಧೀ ಸ್ಮೃತಿಯ ಕಾರ್ಯ ನಿರ್ವಹಣೆಯ ಪ್ರಥಮ ಸಂಚಾಲಕರಾಗಿ ನೇಮಿತ ರಾದರು. ಆ ಸಂದರ್ಭದಲ್ಲಿ ಇಂತಹ ಕಾರ್ಯಕ್ಕೆ ಅವರಂತಹ ಯೋಗ್ಯ ವ್ಯಕ್ತಿಗಳು ಇವರನ್ನು ಬಿಟ್ಟರೆ ಮತ್ತಾರು ಇರಲಿಲ್ಲ. ತಮ್ಮ ಕೊನೆಯುಸಿರು ಇರುವವರೆಗೂ ಅದನ್ನು ಅವರು ಸಮರ್ಥ ರೀತಿಯಲ್ಲಿ ನಿಭಾಯಿಸಿದ ಮಹಾನುಭಾವರು.

ಕಾಕಾರವರು ಇನ್ನೂ ಅನೇಕ ಸಂಘ ಸಂಸ್ಥೆಗಳಲ್ಲಿ ರಚನಾತ್ಮಕ ಕಾರ್ಯಗಳನ್ನು ಮಾಡಿದ್ದಾರೆ. ಭಾರತದ ಸಂವಿಧಾನ ಸಭೆಯ ಕಾರ್ಯಕರ್ತರೂ ಮತ್ತು ರಾಜ್ಯ ಸಭೆಯ ಸದಸ್ಯರಾಗಿಯೂ ತಮ್ಮ ಅಮೂಲ್ಯ ಸೇವೆ ಸಲಹೆಗಳನ್ನಿತ್ತು ರಾಷ್ಟ್ರಕ್ಕೆ ಗಾಂಧೀ ತತ್ವದ ಚಾಲನೆಯನ್ನು ಕೊಡುತ್ತಿದ್ದರು. ಭಾರತ ಸರಕಾರ ಅವರನ್ನು ಪದ್ಮ ವಿಭೂಷಣ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತ್ತು. ಅನೇಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳಿಂದಲೂ ಗೌರವಿಸಲ್ಪಟ್ಟಿದ್ದರು.

ಕಾಕಾ ಕಾಲೇಲ್ಕರ್‌ರವರು ಉತ್ತಮ ಸಾಹಿತಿಗಳಾಗಿದ್ದರು. ಅವರು ಹಿಂದಿ ಮತ್ತು ಗುಜರಾತಿ ಭಾಷೆಗಳಲ್ಲಿ ಅನೇಕ ದರ್ಜೆ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಆಧ್ಯಾತ್ಮ ಮತ್ತು ಸಂಸ್ಕೃತಿಗಳ ಪ್ರಚಾರಕ್ಕೆ "ಮಂಗಳ ಪ್ರಭಾತ" ಎಂಬ ಒಂದು ಸಾಪ್ತಾಹಿಕ ಪತ್ರಿಕೆಯನ್ನು ಹೊರಡಿಸುತ್ತಿದ್ದರು. ಇಂತಹ ಮಹಾತ್ಯಾಗಿ, ದೇಶ ಪ್ರೇಮಿಗಳು ವಿರಳ, ತಮ್ಮ 96 ನೇ ತುಂಬು ಬಾಳಿನ ಆಯುಷ್ಯದಲ್ಲಿ ನಮ್ಮನ್ನಗಲಿದ್ದಾರೆ.

---

## ಭಕ್ತಿ-ಮುಕ್ತಿ

ಪರ ಶಿವನ ಕೃಪೆಗಿಂತ ಮಿಗಿಲಾದುದಿಲ್ಲ ।
ಸುಮ್ಮನೆ ಅದು ಮಾತ್ರ ಸಿಕ್ಕುವುದೆ ಅಲ್ಲ ॥
ಹಣ್ಣು ಕಾಯ್ಗಳ ರಾಶಿ ಹಾಕಿದರು ಕೂಡ ।
ಭಕ್ತಿಯೊಂದನು ಬಿಟ್ಟು ಮತ್ತೊಂದ ನೋಡ ॥

—ಹೆಗ್ಗವಾಡಿ ಗುರುಸಿದ್ದಪ್ಪ.

# ಶರಣರು ನಡೆದು ಬಂದ ದಾರಿ

—ವೀರಭದ್ರಪ್ಪ ಅಂದಾನಿ, ಗೋಕಾ

ಸಾತ್ವಿಕರಾದ ಮಹಾನುಭಾವಿಗಳಿಗೆ ಶರಣರೆಂದೆನ್ನಬಹುದು. ಇಂಥವ ಬಾಳುವೆಯೇ ಶರಣರ ಜೀವನ. ಬುದ್ಧಿಜೀವಿಯಾದ ಮಾನವನು ತನ್ನ ಆತ್ಮ ನಿರೀಕ್ಷೆಯ ಅಭಾವದಿಂದ ತನ್ನ ಜೀವನದ ಅಂತ್ಯಪರ್ಯಂತ ಪಶುಗಳಿಗಿಂತ ಕಡೆಯಾ ಜೀವನವನ್ನು ಸಾಗಿಸುವನು. ಮೊದಲು ಪಶುಮಟ್ಟಕ್ಕೇರಿ ಮಾನವನಾಗಬೇಕಾಗ ವುದು. ಮಾನವ ಗುಣ ಬಂದರೆ ಮಹಾನುಭಾವಿಯಾಗಬಲ್ಲನು. ಮಾನವರ ನಡೆ ನುಡಿಗಳಿಂದ ರಾಕ್ಷಸ, ಮಾನವ, ದೇವಮಾನವ ಅಂತ ಮೂರು ಭಾಗಗಳನ್ನು ಮಾ ಲಾಗಿದೆ. ತನಗೆ ಹಿತವನ್ನು ಅನ್ಯರಿಗೆ ಅಹಿತವನ್ನು ಮಾಡುವವರು ರಾಕ್ಷಸವಗ ದವರು. ತನ್ನ ಹಿತವನ್ನು ನೋಡಿಕೊಂಡು ಎರಡನೆಯವರ ಹಿತ ಬಯಸುವವರ ಮಾನವ ವರ್ಗದವರು. ಇನ್ನು ತಮ್ಮ ಹಿತವನ್ನು ಬಯಸದೆ ಪರರ ಹಿತಕ್ಕಾಗಿಯೆ ಹಾತೊರೆಯುವರು ಇಂಥವರು ದೇವಮಾನವರು. ಇವರೇ ಶರಣರು, ಅವರು ಸಾತ್ವಿ ಮಾರ್ಗದಿಂದ ತಮ್ಮ ಸಾರ್ಥಕ ಜೀವನವನ್ನು ಸಾಗಿಸುವರು. ಅರಿಷಡ್ವೈರಿಗಳನ್ನು ಜಯಿಸಿ ರಾಗ, ದ್ವೇಷ, ಅಹಂಕಾರ, ಮಮಕಾರಗಳನ್ನು ಬಿಟ್ಟು ಸತ್ಯ ನುಡಿವ ಧರ್ಮ ಮತ್ತು ಅಹಿಂಸೆಯನ್ನಾಚರಿಸಿದರು ಶರಣರು. ಕಳವು ಮಾಡುವುದು, ಕೊಲ್ಲ ವುದು, ಸುಳ್ಳು ಮಾತಾಡುವುದು, ಸಿಟ್ಟಿನಿಂದ ಮಾತಾಡುವದು, ಅನ್ಯರನ್ನು ಹಿಯಾ ಳಿಸುವುದು, ನಿಂದಿಸಿ ನುಡಿಯುವುದು ಇವೇ ಮೊದಲಾದ ದುರ್ಗುಣಗಳು ಶರಣ ಜೀವ ನಕ್ಕೆ ಅಡತಡಿ ತಂದೊಡ್ಡುವವೆಂದು ತಿಳಿದು ಅವುಗಳಿಂದ ಅಲಿಪ್ತರಾಗಿದ್ದರು. ತಾಮಸ ವೃತ್ತಿ ಬೆಳೆಯುವ ಅಭಿಕ್ಷ್ಯ ಸೇವನೆಯನ್ನು ತ್ಯಜಿಸಿದರು. "ಅಯ್ಯಾ ಎಂದರೆ ಸ್ವರ್ಗ ಎಲ್ಲವೋ ಎಂದರೆ ನರಕ" ಸಮವಿನಯವೇ ಸದಾಶಿವನ ಒಲುಮೆಯಯ್ಯಾ ಅನ್ನುವ ಹಾಗೆ ಸದಾ ವಿನಯಶೀಲರಾಗಿ ಸತಿಪತಿಗಳಾದವರು ಅನ್ಯೋನ್ಯ ಪ್ರೀತಿಯುಳ್ಳವರಾಗ ಒಬ್ಬರೊಬ್ಬರ ಹಿತವನ್ನರಿತು ಸಂಸಾರವು ಸುಖಮಯವಾಗುವಂತೆ ವರ್ತಿಸುತ್ತಿದ್ದರು. "ಸತಿಪತಿಗಳೊಂದಾದ ಭಕ್ತಿ ಶಿವನಿಗೆ ಹಿತವಪ್ಪುದು" ಅಂದರೆ ಇಬ್ಬರಲ್ಲಿಯೂ ದೇವ ಭಕ್ತಿಯು ಇರಬೇಕೆಂಬುದು ಅವರ ಉದ್ದೇಶ. ಕೇವಲ ಹೊಟ್ಟೆಬಟ್ಟೆಗಾಗಿ ದುಡಿಯುವ ಉದ್ಯೋಗಕ್ಕಿಂತ ಶರಣರ ಕಾಯಕ ತತ್ವವೇ ಶ್ರೇಷ್ಠವಾದದ್ದೆಂದು ಗ್ರಹಿಸಿ ಪರರನ್ನು ವಂಚಿಸದೆ, ಅನ್ಯಾಯಮಾಡದೆ, ಸತ್ಯಶುದ್ಧವಾದ ದಿನನಿತ್ಯ ಕಾಯಕದಿಂದ ಬಂದದ ರಲ್ಲಿ ಜಂಗಮರ ಹಾಗೂ ಅತಿಥಿ ಅಭ್ಯಾಗತರನ್ನು ತೃಪ್ತಿಪಡಿಸಿ ಮಿಕ್ಕುಳಿದದನ್ನು ತಮ್ಮ ಉದರ ಪೋಷಣೆಗೆ ನಿರ್ವಹಿಸುತ್ತಿದ್ದರು. ಕಾಯಕದಿಂದ ಕೈಲಾಸವೆಂಬುದನ್ನು ಮನ ಗಾಣಿಸಿ ಅದರಿಂದ ಆರ್ಥಿಕ ಸಮತೆಯನ್ನು ಸಮಾಜದಲ್ಲಿ ಬಿತ್ತರಿಸಿದರು. ಶರಣ

ಶರಣೆಯರು ತಮ್ಮ ತಮ್ಮ ಬೇರೆ ಬೇರೆ ಕಾಯಕಗಳನ್ನು ವಹಿಸುತ್ತಿದ್ದರು. ಇಂಥ ವೃತ್ತಿಯನ್ನು ಎಲ್ಲರೂ ಕೈಕೊಂಡರೆ ದೇಶದಲ್ಲಿ ಭ್ರಷ್ಟಾಚಾರ, ವಂಚನೆ, ಮೋಸ, ಕಳವು, ಅನೀತಿ, ದುರಾಚಾರ ಮೊದಲಾದ ಅಸುರೀ ಕೃತ್ಯಗಳು ನಾಶವಾಗಿ ಸರ್ವರೂ ಸುಖಿಗಳಾಗುವುದರಲ್ಲಿ ಸಂದೇಹವಿಲ್ಲ. ಪರೋಪಕಾರವೇ ಪುಣ್ಯ. ಪರಪೀಡೆಯೇ ಪಾಪವೆಂಬುದನ್ನರಿತು ಆಚಾರವೇ ಸ್ವರ್ಗ ಅನಾಚಾರವೇ ನರಕ ಎಂಬ ಮಾರ್ಗ ವನ್ನು ಅನುಸರಿಸಿ ಶುದ್ಧಭಾವನೆ ಹೊಂದಿ ಸದಾಚಾರಿಗಳಾಗಿ ಅಂತಕರುಣವುಳ್ಳವರಾಗಿ ಪರಹಿತಕ್ಕಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಸ್ಮಶಾನ ವೈರಾಗ್ಯವು ನಿತ್ಯ ಜೀವನದಲ್ಲಿ ಬಂದರೆ ದುಃಖವೆಂಬುದೇ ಇರುವುದಿಲ್ಲ. ನಿಜ ವೈರಾಗ್ಯವು ನೆಲೆ ಗೊಂಡು ನಿಂದೊಡೆ ಭವದ ಬಾಧೆ ತನ್ನೊಳು ತೋರದು ಎಂಬ ಮಾತನ್ನು ಅಳವಡಿಸಿ ಕೊಂಡು ವೈರಾಗ್ಯ ಶಿಖರವನ್ನೇರಿ ತನ್ನ ತಾನರಿದು ತಾನೇ ಆದರೆ ತಾನೇ ಲಿಂಗವೆಂಬ ಭಾವದಲ್ಲಿ ಬೆರೆದಳು ಅಕ್ಕಮಹಾದೇವಿ.

ಶರೀರಾದಿ ಸರ್ವ ಪದಾರ್ಥಗಳನ್ನು ಶಿವನಿಗರ್ಪಿಸುವ ಸಮರ್ಪಣ ಹೃದಯದಲ್ಲಿ ನಾನು ಶಿವನ ದಾಸನೆಂದ ಆಚರಿಸುವುದೇ ದಾಸೋಹಂ ಭಾವವು, ವೀರಶೈವರ ಅದ್ವೈತ ಮಾರ್ಗದಲ್ಲಿ ಶಿವಪೂಜಾ ಭೇಧವಿಲ್ಲದಿದ್ದರೂ ಜೀವನಕಾಲದಲ್ಲಿ ಮಾತ್ರ ಜೀವನು ತನ್ನನ್ನು ಪದಾರ್ಥವೆಂದು ಭಾವಿಸಿ ದಾಸೋಹಂಭಾವದಿಂದ ಶಿವನಿಗೆ ಅರ್ಪಿಸಿ ಕೊಳ್ಳುವನು. ಇದೇ ಶರಣರ ದಾಸೋಹಂಭಾವದ ಸ್ವರೂಪ ಹಾಗೂ ಬದುಕುವ ರೀತಿ ನಿಲವು"ಸೋಹಂ"ಮತ್ತು "ಶಿವೋಹಂ" ಎಂಬ ಗರ್ವ ಅಹಂಕಾರಗಳನ್ನು ಕಳೆದು. ದಾಸೋಹಂಭಾವ ಕರುಣಿಸೆಂದು ಬೇಡಿಕೊಂಡಿರುವರು: ದಾಸೋಹಕ್ಕೆ ಅಧ್ಯಾತ್ಮದ ಸ್ವರೂಪವನ್ನು ಕೊಟ್ಟಿದ್ದಾರೆ. ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನ ನೀಡುವುದೆ ತ್ರಿವಿಧ ದಾಸೋಹವೆನಿಸುತ್ತದೆ. ಅಂತಾ ಬಸವಣ್ಣನವರ ಮಾತು "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಅನ್ನುವ ಅವರ ವಚನದಿಂದ ದಾಸೋಹಂಭಾವವು ಅವರ ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿದ್ದು ಕಂಡುಬರು ವುದು. ಢಂಬಾಚಾರಕ್ಕೆ, ಶುಷ್ಕಾಚಾರಕ್ಕೆ, ಡಾಂಬಿಕ ಭಕ್ತಿಗೆ ಶರಣಧರ್ಮ ಮಹತ್ವ ವನ್ನು ಕೊಡಲಿಲ್ಲ. ಆಚಾರವೆಂದರೆ ಶರಣರ ದೃಷ್ಟಿಯಲ್ಲಿ ಸನ್ಮಾರ್ಗಕ್ಕೊಯ್ಯುವ ವೈಯಕ್ತಿಕ ಸತ್ಕ್ರಿಯೆಯಾಗಿತ್ತು. ಧರ್ಮಭಂಡಾರಿ ಬಸವಣ್ಣನವರು ಭೇದ ಭಾವದ ಗೋಡೆಯನ್ನು ತೊಳೆದು ಧಾರ್ಮಿಕ ಸಮತೆಯ ಧ್ವಜವನ್ನೇರಿಸಿ ಎಲ್ಲರಿಗೆ ಹಿತವಾದ ವ್ಯವಸ್ಥೆ ಸಾಧಿಸಿದರು. ಮಾನವನ ಇಹಪರ ಸುಖವನ್ನು ತಂದೀಯುವ ಸಾಧನವೇ ಧರ್ಮವೆಂದು ಸಾರಿದರು. ಮಾನವ ಮಾನವರಲ್ಲಿ ಜನ್ಮದಿಂದಾಗಲೀ, ಕಾಯಕ ದಿಂದಾಗಲೀ, ವರ್ಗದಿಂದಾಗಲೀ, ಜಾತಿಯಿಂದಾಗಲೀ, ಮೇಲು ಕೀಳೆಂದು ಭಾವಿಸದೆ ಅವರ ಗುಣಗಳಿಂದ ವ್ಯಕ್ತಿತ್ವವನ್ನು ಅಳೆಯಬೇಕೆಂಬ ಹಾಗೂ ಸಕಲ ಜೀವಾತ್ಮರಿಗೆ ಲೇಸ ಬಯಸುವವರನ್ನು ಕುಲಜರೆಂದು, ಹಾನಿ ಮಾಡುವವರನ್ನು

ಅಂತ್ಯಜರೆಂದು ಗುಣೈಕ ದೃಷ್ಟಿಯಿಂದ ಮನ್ನಿಸಬೇಕೆಂಬ ಸಾಮಾಜಿಕ ಸಮತೆಯನ್ನು ಆಚರಣೆಯಲ್ಲಿ ತಂದರು ಶರಣರು. ಸದಾಚಾರಿಯೇ ಕುಲಜರು ಅನಾಚಾರಿಯೇ ಹೊಲೆಯರು ಮತ್ತು ಪರಮಾತ್ಮನಿಗೆ ಶರಣರೆಂದವರು ಕುಲಹೀನರಾದರೂ ಅವರು ಉತ್ತಮ. ಆದರೆ ಉತ್ತಮರೆನಿಸಿ ಶಿವನಿಗೆ ಶರಣೆನ್ನದವರು ಹೊಲೆಯರಂತೆ ಸಾ ದರು. ಒಟ್ಟಿನಮೇಲೆ ನೋಡಲಾಗಿ ಶರಣ-ಶರಣೆಯರು ಭಕ್ತಿ, ಜ್ಞಾನ, ವೈರಾಗ್ಯ ವನ್ನು ತಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡಿದ್ದರು.

ಬಸವಣ್ಣನವರ ಆದರ್ಶ ಮನೋಭೂಮಿಕೆಯಂತೆ ಅಲ್ಲಮಪ್ರಭುದೇವರ ಹಿ ತನದಲ್ಲಿ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಉನ್ನತ ತತ್ವಗಳಿಗೆ ಸಾರ್ವತ್ರಿಕ ಕ್ರಿಯಾ ತ್ಮಕ ಸ್ವರೂಪವನ್ನೀಯುವ ಅನುಭವ ಮಂಟಪವು ಸ್ಥಾಪನೆಯಾಯಿತು. ಅನುಭವ ಮಂಟಪದ ಅಚ್ಚಿನಲ್ಲಿ ಶರಣರ ದಿವ್ಯಾಗ್ನಿಯಿಂದ ಒಳ್ಳೆಯ ಸಂಸ್ಕಾರವನ್ನಿತ್ತು ಅಜ್ಞಾನಿ ಗಳಾಗಿದ್ದ ಅನೇಕರನ್ನು ಸುಜ್ಞಾನಿ ಶರಣ ಶರಣೆಯರನ್ನಾಗಿ ಮಾಡಿದರು. ಶರಣರು ಸಂಸಾರದಲ್ಲಿದ್ದು ಭೋಗವಿಷಯಕವಾದ ಮೋಹತ್ಯಾಗದಿಂದ ಶುದ್ಧ ಭಾವನೆಯನ್ನಿಟ್ಟು ಕೊಂಡು ನುಡಿದಂತೆ ನಡೆದು ಇಹಜೀವನದಲ್ಲಿಯೇ ಪರಸುಖದ ಅನುಭವವನ್ನು ಹೊಂದಿ ಸಾರ್ಥಕ ಜೀವನವನ್ನು ಸಾಗಿಸಿದರು, ಸಾಗಿಸುತ್ತಲೂ ಇರುವರು. ಇದುವೇ ಶರಣರು ನಡೆದು ಬಂದ ದಾರಿ.

## ಸಂಖ್ಯೆ ಅಂಕೆ !

—ಹೆಗ್ಗವಾಡಿ ಗುರುಸಿದ್ದಪ್ಪ

ತ್ರಿಕರಣವೆಂದರೆ ಕೈ ಬಾಯಿ ಕಚ್ಚೆ ।
ವ್ಯತ್ಯಾಸವಾದಲ್ಲಿ ಬದುಕೆಲ್ಲ ರೊಚ್ಚೆ ॥
ಸಂಖ್ಯೆ ಮೂರಾದರೂ ಅಂಕೆಯಲಿ ಕಷ್ಟ ।
ಅಂಕೆಯಲ್ಲಿಟ್ಟಾತ ಜಗದಲ್ಲಿ ಶ್ರೇಷ್ಠ ॥

## ದುರುಳ ಮರುಳ !

ದುರುಳನಿಗೂ ಮರುಳನಿಗೂ ಕೊಂಚ ವ್ಯತ್ಯಾಸ ।
ಇಬ್ಬರಿಂದಲು ಉಂಟು ಜಗದಲ್ಲಿ ನಾಶ ॥
ತಾಕೆಟ್ಟು ಪರರನ್ನು ಕೆಡಿಸುವವ ಮರುಳ ।
ಪರರ ಕೆಡಿಸಲು ಹೋಗಿ ತಾ ಕೆಡುವ ದುರುಳ ॥

# ಕಿಟ್ಟು–ಪುಟ್ಟು

—ಪ. ರಾಮಕೃಷ್ಣ ಶಾಸ್ತ್ರಿ

ಬೆಳಗ್ಗೆ ರೇಡಿಯೋದಲ್ಲಿ ವಾರ್ತೆಯನ್ನು ಆಲಿಸುತ್ತಿದ್ದ ಕಿಟ್ಟು ಬಿಕ್ಕಳಿಸಿ ಅಳತೊಡಗಿದ. ಅಲ್ಲೇ ಕುಳಿತು ಓದುತ್ತಿದ್ದ ಪುಟ್ಟು ಕೇಳಿದ, "ಯಾಕೋ ಏನಾಯ್ತೋ? ಯಾಕೆ ಹೀಗೆ ಅಳ್ತಾ ಇದ್ದೀಯೋ?

ಕಿಟ್ಟು ಅಳುತ್ತಲೇ ಹೇಳಿದ "ಕೇಳೋದಿಕ್ಕೆ ಆಗೋದಿಲ್ಲ ಕಣೋ, ಬೆಂಗಳೂರಿನಲ್ಲಿ ಕಂತ್ರಿ ಸಾರಾಯಿ ಕುಡಿದು ಮೂನ್ನೂರಕ್ಕೂ ಹೆಚ್ಚು ಜನ ಸತ್ಹೋದ್ರಂತೆ. ಅಪರಾಧಿಗಳಿನ್ನು ಪೋಲೀಸರ ಕೈಗೆ ಸಿಕ್ಕಿಲ್ಲಂತೆ. ಹೀಗೂ ಆಗ್ತಾ ಉಂಟಲ್ಲ, ಜನರನ್ನು ಕೊಲ್ತಾ ಇದ್ದಾರಲ್ಲಾಂತ ದುಃಖವಾಗ್ತಿದೆ."

"ಲೋ ಮಂಕೆ ಇದಕ್ಕೆ ಅಳ್ಬೇಕಾ? ನೀನು ಪೋಲೀಸ್ ಇನ್ಸ್‌ಪೆಕ್ಟರಾಗಿ ಇಂಥದ್ದೆಲ್ಲ ಪತ್ತೆ ಮಾಡ್ಬೇಕು. ಹೀಗೆ ಅನ್ಯಾಯ ಮಾಡೋರನ್ನ ಹಿಡಿದು ಜೈಲಿಗೆ ತಳ್ಬೇಕು" ಪುಟ್ಟು ಆವೇಶದಿಂದ ಹೇಳುವಾಗ ನಗೆ ಬಂತು. "ಹೋಗೋ ಹೋಗೋ ಇವತ್ತು ಶಾಲೆಗೆ ಹೇಗೂ ರಜೆಯಿದೆ. ಸ್ವಲ್ಪ ಹೊತ್ತು ಪೇಟೇಲಿ ತಿರುಗಾಡಿಕೊಂಡು ಬರೋಣ" ಎಂದ.

ಇಬ್ಬರೂ ಪೇಟೆಗೆ ಹೊರಟರು. ಸಂತೆ ಕಟ್ಟೆಯ ಬಳಿ ಛೋಟಾ ಜಾದೂಗಾರನ ಮಂಗನ ಕುಣಿತ ನಡೆದಿತ್ತು. ಹುಡುಗರು ಆಸಕ್ತಿಯಿಂದ ನೋಡುತ್ತಾ ನಿಂತರು. ಒಂದೊಂದಾಗಿ ಆಟ ತೋರಿಸುತ್ತಾ ಜಾದೂಗಾರ ಇದ್ದಕ್ಕಿದ್ದಂತೆಯೇ ಹೊಳೆಯುವ ಕಣ್ಣುಗಳಿಂದ ಪುಟ್ಟುವನ್ನು ನೋಡಿದ. ಪುಟ್ಟುವಿನ ಮುಖದ ಮೇಲೆ ಅವನ ದೃಷ್ಟಿ ನೆಟ್ಟಿತು. ಅರೆಕ್ಷಣದಲ್ಲಿ ಬೇರೆಡೆ ಮುಖ ತಿರುಗಿಸಿ "ನೋಡಿ. ನಾನೀಗ ರಸ್ತೆಯಲ್ಲಿರುವ ದೂಳನ್ನು ಅಂಗೈಯಿಂದ ಮುಚ್ಚಿ, ಪೆಪ್ಪರ್‌ಮೆಂಟ್ ಮಾಡ್ತೇನೆ. ಇದು ಇಂದಿನ ಕೊನೆಯ ತಮಾಷೆ" ಎಂದು ತಮಟೆ ಬಡಿದು ಅಂಗೈ ತುಂಬ ದೂಳನ್ನು ಮುಚ್ಚಿಕೊಂಡು "ಉಫ್" ಎಂದ.

ಅಂಗೈ ತೆರೆದಾಗ ಭಾರೀ ತಮಾಷೆ! ಅಲ್ಲಿ ತುಂಬಾ ಪೆಪ್ಪರ್‌ಮೆಂಟ್‌ಗಳು.

ಜಾದೂಗಾರ ಅದರಿಂದ ಒಂದು ಪೆಪ್ಪರ್‌ಮೆಂಟ್ ತಂದು ಪುಟ್ಟುವಿಗೆ ಕೊಟ್ಟು "ತಗೋ ತಿನ್ನು, ಮಗು" ಎಂದು ಹೇಳಿದ. ಪುಟ್ಟು ಗಬಕ್ಕನೆ ಬಾಯಿಗೆ ಹಾಕಿಕೊಂಡ.

ಬೇರೆ ಯಾವ ಮಕ್ಕಳಿಗೂ ಜಾದೂಗಾರ ಸಿಹಿ ಕೊಡಲಿಲ್ಲ. ತನ್ನ ಆಟ ಮುಗಿಸಿ ಚಿಲ್ಲರೆ ಕೊಟ್ಟವರಿಗೆಲ್ಲಾ ಸಲಾಂ ಹೊಡೆದ. ಗುಂಪು ಚದುರಿತು, ಅವನು ಗಂಟು ಗದಡಿ ಕಟ್ಟಿ ಹೊರಟ. ಅವನ ಹಿಂದಿಂದೆ ಪುಟ್ಟುವೂ ಹೋಗಲಾರಂಭಿಸಿದ.

"ಬಾರೋ ಹೊತ್ತಾಯ್ತು ಮನೆಗೆ ಹೋಗೋಣ" ಕಿಟ್ಟು ಗೆಳೆಯನನ್ನು ಕರೆದ.

"ನಾನು ಬರೋದಿಲ್ಲ" ಪುಟ್ಟು ಸಿಡುಕಿನಿಂದ ಹೇಳಿ ಮಂತ್ರಮುಗ್ಧನಂತೆ ಜಾದೂಗಾರನ ಬೆನ್ನು ಹಿಡಿದ. ಯಾವುದೋ ವಾಹನ ಬಂದಿತು. ಅದನ್ನು ನಿಲ್ಲಿಸಿ ಜಾದೂಗಾರ ಏರುತ್ತಲೇ ಪುಟ್ಟುವೂ ಅದನ್ನೇರಿ ಕುಳಿತ. ವಾಹನ ಹೊರಟುಹೋಗಿಯೇ ಬಿಟ್ಟಿತು.

ಕಿಟ್ಟು ಭೂತಬಡಿದವನಂತೆ ನೋಡುತ್ತಲೇ ನಿಂತವ ಎಷ್ಟೋ ಹೊತ್ತಿನ ಮೇಲೆ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಗಾಬರಿಯಾದ. ಜಾದೂಗಾರರು ಮಂತ್ರ ಮೋಡಿ ಹಾಕಿ ಮಕ್ಕಳನ್ನು ಅಪಹರಿಸುತ್ತಾರೆ ಎನ್ನುವ ಮಾತು ತಮಟೆಯ ಧ್ವನಿಯಂತೆ ಬಾರಿಸಿತು.

ಕಿಟ್ಟು ಕೂಡಲೇ ಪುಟ್ಟುವಿನ ಮನೆಗೆ ಹೋಗಿ ನಡೆದ ಸಂಗತಿಯನ್ನು ಹೇಳಿದ. ಆದರೆ ಪುಟ್ಟುವಿನ ತಂದೆ ಅದನ್ನು ನಂಬಲಿಲ್ಲ. "ಯಾರಿಗೆ ಹೇಳ್ತಾ ಇದೀಯೋ ಈ ಕಟ್ಟುಕಥೇನ? ಯಾರೊಂದಿಗೊ ಸೇರಿಕೊಂಡು ನೀನು ಪುಟ್ಟೂನ ಎಲ್ಲೋ ಅಡಗಿಸಿಟ್ಟು ನನ್ನಿಂದ ಹಣ ಕೀಳೋದಿಕ್ಕೆ ಹಂಚಿಕೆ ಹಾಕ್ತಾ ಇದ್ದೀ. ಒಳ್ಳೇ ಮಾತಿನಲ್ಲಿ ಅವನನ್ನ ಇಲ್ಲಿಗೆ ಕರೆತಂದೀಯೋ ಸರಿ. ಇಲ್ಲ ಅಂತಾದ್ರೆ ಪೋಲೀಸ್ನೋರಿಗೆ ಹೇಳಿ ನಿನ್ನ ಚರ್ಮ ಸುಲಿಸಿಬಿಡ್ತೀನಿ" ಎಂದು ಅಬ್ಬರಿಸಿದರು.

ಹೀಗೆ ಯಾರೋ ಎಸೆದ ಹಗ್ಗ ತನ್ನ ಕೊರಳಿಗೆ ಸುತ್ತಿಕೊಂಡಿತು ಅಂತ ಕಿಟ್ಟು ಭಾವಿಸಿರಲಿಲ್ಲ. ಅವನಿಗೆ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಹಾಗಾಯಿತು. ಚಿಂತೆಯಲ್ಲಿ ಸಿಲುಕಿದ ಕಿಟ್ಟು ತನ್ನ ಪ್ರಾಣಸ್ನೇಹಿತ ಪುಟ್ಟುವನ್ನು ಹೇಗಾದರೂ ಮರಳಿ ಕರೆತರಲೇಬೇಕು ಎಂದು ನಿರ್ಧರಿಸಿದ. ಆದರೆ ಹೇಗೆ ಎಂದು ತಿಳಿಯಲಿಲ್ಲ ಅವನಿಗೆ.

ಕಿಟ್ಟುವಿನ ಮನೆಗೆ ಸನಿಹದಲ್ಲೆ ಒಂದು ದಟ್ಟವಾದ ಕಾಡು ಇತ್ತು. ಆ ಕಾಡಿನಲ್ಲಿ ಒಂದು ಹಾಳು ಬಿದ್ದ ಭೈರವನ ಗುಡಿ ಇತ್ತು. ಕಾಡು ಬಿಳಲುಗಳಿಂದ ಆವರಿಸಿ, ಅಲ್ಲಲ್ಲಿ ಕುಸಿದುಬಿದ್ದರೂ ಗುಡಿಯ ಭೈರವ ಮಹಾ ಕಾರಣಿಕದವನೆಂದು ಅಜ್ಜ ಹೇಳುತ್ತಿದ್ದ ಮಾತು ಇನ್ನೂ ಅವನಿಗೆ ನೆನಪಿತ್ತು. ಭೈರವನ ಮೊರೆ ಹೊಕ್ಕರೆ ಅವನು ತನಗೆ ಸಹಾಯ ಮಾಡಬಹುದು. ಇದಲ್ಲದೆ ತನಗೆ ನೆರವಾಗುವ ಗೆಳೆಯರು ಬೇರೆ ಯಾರು ಇಲ್ಲ.

ಪುಟ್ಟು ಕಾಣೆಯಾದುದನ್ನು ಬೇರೆ ಯಾರಲ್ಲೂ ಹೇಳಲಿಲ್ಲ ಕಿಟ್ಟು. ರಾತ್ರಿ ಎಲ್ಲರೂ ನಿದ್ರೆ ಹೋಗುವುದನ್ನೇ ಕಾದಿದ್ದು ಸದ್ದಿಲ್ಲದೆ ಮನೆಯಿಂದ ಹೊರಟ. ಯಾರಿಗೂ ಈ ಸುದ್ದಿ ತಿಳಿಯಬಾರದು, ಪುಟ್ಟುವನ್ನು ಕಾಣದೆ ತಾನಿನ್ನು ಮನೆಗೆ ಹಿಂತಿರುಗಲಾರೆನೆಂದು ನಿರ್ಧರಿಸಿ, ಕತ್ತಲಿನ ದಾರಿಯಲ್ಲಿ ಟಾರ್ಚು ಬೆಳಗುತ್ತಾ ಸಾಗಿದ. ಅವನೆ ಕಿಟ್ಟು ಧೈರ್ಯಶಾಲಿ, ರಾತ್ರಿಯಲ್ಲಿ ಒಂಟಿಯಾಗಿ ಸಂಚರಿಸಲು ಅವನಿಗೆ ಯಾವ ಭೀತಿಯೂ ಇರಲಿಲ್ಲ.

ಕಿಟ್ಟು ನಡೆಯುತ್ತಾ ಭೈರವನ ಗುಡಿಯನ್ನು ತಲುಪಿದ. ಆಗ ಆ ಕರಾಳ ವಿಕಾರವಾದ ಧ್ವನಿಗಳು ಎತ್ತಣಿಂದಲೂ ಕೇಳಿಬಂದುವು. ಗೆಜ್ಜೆಯ ಘಿಲ್ ಘಿಲ್ ಸದ್ದು. ವಿಕಟವಾದ ನಗು ಅದರೊಂದಿಗೇ ರಾತ್ರಿಯ ಕೀಟಗಳ ಕೂಡು ಎಂಥವನ ಎದೆಯನ್ನು ಝಲ್ಲೆನಿಸುವಂತಿತ್ತು. ರಾತ್ರಿ ಭೈರವನ ಗುಡಿಯ ಸನಿಹ ಭೂತಗಣಗಳು ತಿರುಗಾಡುತ್ತಿರುತ್ತವೆ ಎಂದು ಕೆಲಸದ ಆಳು ನಿಂಗಪ್ಪ ಹೇಳುವುದಿತ್ತು. ಅವು ಅಲ್ಲಿ ಬಂದವರ ಮೇಲೆ ಮರಳು ಎಸೆಯುತ್ತವೆಯಂತೆ, ಬೀಟಿನ ಪೋಲೀಸ್ ಕೆಂಚಪ್ಪ ಇದರಿಂದಾಗಿ ರಕ್ತಕಾರಿ ಸತ್ತನಂತೆ. ಆದರೆ ಗುರುವಾಯೂರಪ್ಪನ ಹೆಸರು ಹೇಳುತ್ತಾ ಹೋದರೆ ಯಾವ ಭೂತದ ಭಯವೂ ಇಲ್ಲವಂತೆ! ಕತ್ತಲೆಯಲ್ಲಿ ಮೆಲ್ಲಗೆ ನಡೆಯುತ್ತಾ ಕಿಟ್ಟು ಗುಡಿಯೊಳಗೆ ಹೊಕ್ಕ.

ಗುಡಿಯ ಒಳಗೆ ಬಾವಲಿಗಳು ಪಟಪಟನೆ ಹಾರಾಡುತ್ತಿದ್ದವು. ಕೊಳೆತ ದುರ್ಗಂಧ ಅಲ್ಲೆಲ್ಲಾ ಇಡುಗಿತ್ತು. ಭೈರವನ ಎದುರು ನಿಂತು, ತನ್ನ ಗೆಳೆಯನನ್ನು ಮರಳಿ ಕರೆತರಲು ತಕ್ಕ ಸಾಮರ್ಥ್ಯವನ್ನು ದಯಪಾಲಿಸು ಎಂದು ಕಿಟ್ಟು ಪ್ರಾರ್ಥಿಸಬೇಕು. ಅಷ್ಟರಲ್ಲಿ ಕಮಟು ವಾಸನೆಯ ಹೊಗೆಯೊಂದು ಇಡೀ ಗುಹೆಯನ್ನು ಆವರಿಸಿತು. ಆ ಹೊಗೆಯ ಖಾರದಿಂದ ಕಿಟ್ಟುವಿನ ಕಣ್ಣು ಮೂಗುಗಳಲ್ಲಿ ನೀರಿಳಿಯತಾರಂಭಿಸಿತು. ಇದೇನು ವಿಚಿತ್ರ, ಎಲ್ಲಿಂದ ಈ ಹೊಗೆ ಬರುತ್ತಾ ಇದೆ ಎಂದು ಟಾರ್ಚು ಹಾಕಿ, ಕಣ್ಣಲ್ಲಿ ಕಣ್ಣಿಟ್ಟು ಅವನು ಪರೀಕ್ಷಿಸಿದ. ಆಗ ಅವನಿಗೆ ಗಟ್ಟಿಯಾಗಿ ಮಾತುಗಳೂ ಕೇಳಿಸಿಬಂದುವು.

ಇಗರ್ಜಿಯ ಗಂಟೆ ರಾತ್ರಿ ಹನ್ನೆರಡು ಬಾರಿಸುವುದು ಕೇಳಿಸಿತು. ದೂರದಲ್ಲಿ ಬೀಟಿನ ಪೊಲೀಸನ ಬಿಗಿಲಿನ ಸದ್ದು ಕೇಳಿಸಿ, ಮತ್ತೆ ಮೌನ ಆವರಿಸಿತು.

ಕಿಟ್ಟು ಪರೀಕ್ಷಿಸಿದಾಗ ಅಚಲನಾಗಿ ಕುಳಿತ ಭೈರವನ ಶಿಲಾವಿಗ್ರಹ ಕಂಪಿಸುತ್ತಿರುವ ಹಾಗೆ ಕಾಣಿಸಿತು. ಅದರ ಕಣ್ಣುಗಳಿಂದ ದಟ್ಟವಾದ ಹೊಗೆ ಬರುತ್ತಿರುವಂತೆಯೂ ಬಾಯಿಯಿಂದ ಅಸ್ಪಷ್ಟವಾದ ಧ್ವನಿಗಳು ಕೇಳುತ್ತಿರುವಂತೆಯೂ ಕಿಟ್ಟುವಿಗೆ ಗೊತ್ತಾಯಿತು.

ಇದೇನು ವಿಚಿತ್ರ, ಇದರಲ್ಲೇನೋ ರಹಸ್ಯ ಅಡಗಿದೆ-ಕಿಟ್ಟುವಿಗೆ ಕುತೂಹಲ ವಾಯಿತು. ಭೈರವನ ಸನಿಹ ನಿಂತ. ಆಗ ಅವನ ಕಾಲ ಕೆಳಗೆ ಯಾವುದೋ ಗುಂಡಿ ಒತ್ತಿದಂತೆ ಅವನಿಗೆ ಅನಿಸಿತು. ವಿಗ್ರಹ ಗಿರ್ರನೆ ತಿರುಗಿ ಕುಳಿತಿತು. ಟಾರ್ಚು ಬೆಳಗಿಸಿ ಇನ್ನೊಂದು ವಿಚಿತ್ರವನ್ನು ನೋಡಿದ ಕಿಟ್ಟು. ವಿಗ್ರಹವಿದ್ದ ಜಾಗದಲ್ಲಿ ದೊಡ್ಡ ಮಾರ್ಗವಿರುವಂತೆ ಕಾಣಿಸಿ, ಅದರೊಳಗಿಂದ ಬೆಳಕು ಕಾಣಿಸಿತು. ಅವನು ಮೆಲ್ಲನೆ ಅದರೊಳಗೆ ಬಾಗಿದ. ಆಗ ಯಾವುದೋ ಅವ್ಯಕ್ತ ಶಕ್ತಿ ಭರದಿಂದ ಅವನನ್ನು ಒಳಗೆಳೆದುಕೊಂಡಿತು.

ಅದೊಂದು ನೆಲಮಾಳಿಗೆಯಾಗಿತ್ತು. ಪಂಜಿನ ಬೆಳಕು ಅಲ್ಲಲ್ಲಿ ಬೆಳಗುತ್ತಿತ್ತು. ಒಳಗೆ ನೂರಾರು ಜನರು ಕಾರ್ಯಾಚರಣೆಯಲ್ಲಿ ತಲ್ಲೀನರಾಗಿರುವಂತೆ ತೋರಿತು. ಎಲ್ಲರೂ ಕೆಂಪು ನಿಲುವಂಗಿ ಧರಿಸಿದ್ದರು. ಕೈಯಲ್ಲಿ ಕಪ್ಪು ಬೆತ್ತ ಹಿಡಿದಿದ್ದರು: ಕಿಟ್ಟು ಮರೆಯಲ್ಲಿ ನಿಲ್ಲಲು ಪ್ರಯತ್ನಿಸಿದ. ಆಗ ಒಬ್ಬಾತ ಅವನಿದ್ದೆಡೆಗೇ ಬರಬೇಕೆ! ಕಿಟ್ಟು ವಿಗೆ ಕರಾಟೆ ಗೊತ್ತಿತ್ತು. ಮಿಂಚಿನ ವೇಗದಲ್ಲಿ ಅವನು ಬಂದವನ ಮೇಲೆರಗಿದ. ಅವನನ್ನು ಕೆಳಗೆ ಬೀಳಿಸಿದ ಅಕಾಸ್ಮಾತ್ತಾಗಿ ಬಿದ್ದ ಏಟಿನಿಂದ ಆ ವ್ಯಕ್ತಿ ಮೂರ್ಛಿತ ನಾಗಿ ಬಿದ್ದ.

ಕೂಡಲೇ ಕಿಟ್ಟು ಬಿದ್ದವನ ನಿಲುವಂಗಿಯನ್ನು ಕಳಚಿ ತಾನು ಧರಿಸಿಕೊಂಡ. ಅವನ ಬೆತ್ತವನ್ನು ಹಿಡಿದುಕೊಂಡ. ಆ ಸಮಯದಲ್ಲಿ ಎದೆ ಕರಗಿಸುವ ಒಂದು ವಿಚಾರವನ್ನು ಆತ ಗುರುತಿಸಿದ. ಬಿದ್ದವನ ಎರಡೂ ಕಣ್ಣುಗಳನ್ನು ದ್ರಾವಕದಿಂದ ಸುಡಲಾಗಿತ್ತು. ಕಿಟ್ಟು ಧೈರ್ಯದಿಂದ ಮುಂದುವರೆದಾಗ ಯಾರೂ ಅವನನ್ನು ಗುರುತಿಸಲಿಲ್ಲ. ಕಾರಣ ಅವರ ಕಣ್ಣುಗಳೆರಡನ್ನು ದ್ರಾವಕದಿಂದ ಸುಡಲಾಗಿದೆ ಎಂಬುದು ಅವನಿಗೆ ಗೊತ್ತಾಯಿತು.

ಇಲ್ಲಿನ ಕಾರ್ಯಾಚರಣೆ ಏನೆಂಬುದು ತಿಳಿಯದೆ ಕಿಟ್ಟು ಗೊಂದಲದಲ್ಲಿ ಸಿಲು ಕಿದ. ಅವನು ಕುರುಡನಂತೆ ನಟಿಸುತ್ತಾ ಮುಂದೆ ಮುಂದೆ ಹೋದ. ಎಲ್ಲಾ ಕಡೆಯೂ ಒಲೆಗಳನ್ನು ಹಾಕಿದ್ದರು. ಅದರಲ್ಲಿ ದೊಡ್ಡ ಕಡಾಯಿಗಳಲ್ಲಿ ಯಾವುದೋ ವಸ್ತು ಬೇಯುತ್ತಿತ್ತು. ಆ ಕಡಾಯಿಗಳಿಗೆ ಭದ್ರವಾಗಿ ಮುಚ್ಚಳ ಮುಚ್ಚಿ, ನಳಿಗೆ ಯಲ್ಲಿ ಒಂದು ಬಗೆಯ ದ್ರವ ಹರಿಯಲು ವ್ಯವಸ್ಥೆ ಮಾಡಿದ್ದರು. ಆ ದ್ರವ ಇನ್ನೊಂದು ಹಂಡೆಗೆ ತುಂಬುತ್ತಿತ್ತು.

ಕೆಂಪು ನಿಲುವಂಗಿ ಧರಿಸಿದ ನೂರಾರು ಜನರು ಎಲ್ಲರೂ ತನ್ನಂತೆ ಇರುವ ಬಾಲ ಕರೇ ಆಗಿದ್ದಾರೆ ಎನ್ನುವುದು ಕಿಟ್ಟುವಿಗೆ ಗೊತ್ತಾಯಿತು. ಅವರು ಅಭ್ಯಾಸ ಬಲದಿಂದ ಓಡಾಡುತ್ತಿದ್ದರು. ಬೇಯುತ್ತಿದ್ದ ವಸ್ತುವಿಗೆ ಬೆಂಕಿ ಉರಿಸುತ್ತಿದ್ದರು. ಕೆಲವರು

ಹಂಡೆಯಲ್ಲಿರುವ ದ್ರವವನ್ನು ಸಜ್ಜಾಗಿರಿಸಿದ ಶೀಸೆಗಳಿಗೆ ತುಂಬಿಸಿ, ಭೈರವ ತೀರ್ಥ ಎನ್ನುವ ಚೀಟಿಯನ್ನು ಶೀಸೆಗೆ ಅಂಟಿಸುತ್ತಿದ್ದರು. ಎಲ್ಲಾ ವಿಚಿತ್ರ ಅನಿಸಿತು ಕಿಟ್ಟು ವಿಗೆ.

ಕಿಟ್ಟು ಎಲ್ಲಾ ನೋಡುತ್ತಾ ಫಕ್ಕನೆ ಮಲಗಿದ್ದ ಪ್ರಾಣಿಯೊಂದಕ್ಕೆ ತುಳಿದು ಬಿಟ್ಟ. ಅದು ಕ್ರೀಚ್ ಎಂದು ಅರಚಿಬಿಟ್ಟಿತು. ಇಡೀ ನೆಲಮಾಳಿಗೆಯಲ್ಲಿ ಕಲರವ ಎದ್ದಿತು. ಆಗ ದೈತ್ಯಾಕಾರದ ಒಬ್ಬ ವ್ಯಕ್ತಿ, "ಯಾರದು ?" ಎಂದು ಕೂಗುತ್ತಾ ಓಡುತ್ತಲೇ ಬಂದ. ಅವನ ಕಣ್ಣುಗಳು ಕೆಂಡದಂತಿದ್ದುವು ! ನೀಳವಾದ ಗಡ್ಡ, ತಲೆ ಯಲ್ಲಿ ಜಟೆ ಧರಿಸಿದ್ದ. ಕಿಟ್ಟು ಗಡಿಬಿಡಿಯಿಂದ ತಾನೂ ಕುರುಡನಂತೆ ನಟಿಸುತ್ತಾ ಒಂದು ಒಲೆಗೆ ಬೆಂಕಿಯಿರಿಸುತ್ತಾ ಕುಳಿತ. ದೈತ್ಯ ವ್ಯಕ್ತಿ ಹೊರಟುಹೋದ ಮೇಲೆ ಕಿಟ್ಟು ಆ ಪ್ರಾಣಿ ಯಾವುದೆಂದು ನೋಡಿದ. ಅನುಮಾನವೇ ಉಳಿಯಲಿಲ್ಲ, ಅಂದು ಜಾದೂಗಾರ ಕುಣಿಸಿದ್ದು ಅದೇ ಕೋತಿ! ಅದು ಧರಿಸಿದ ಅಂಗಿ ಮತ್ತು ಮಣಿಗಳ ಹಾರ ನೋಡಿ ಕಿಟ್ಟು ಗುರುತಿಸಿದ.

ಹುಡುಕುತ್ತಿದ್ದ ಬಳ್ಳಿ ಕಾಲಿಗೆ ತೊಡರಿದಂತೆ ತೋರಿತು ಕಿಟ್ಟುವಿಗೆ. ಅವನು ಏನಾದರೂ ಕೆಲಸ ಮಾಡುತ್ತಾ ಮುಂದೆ ಹೋದ. ಒಂದೆಡೆ ಭೀಕರವಾದ ದೃಶ್ಯವನ್ನು ಅವನು ನೋಡಿದ. ಅವನಂತೆಯೇ ಇರುವ ಕೆಲವು ಮಂದಿ ಬಾಲಕರನ್ನು ಕೈ ಕಾಲು ಕಟ್ಟಿ ಮಲಗಿಸಲಾಗಿತ್ತು. ಅವರು ಮಿಸುಕಾಡದಂಥ ವಜ್ರ ಬಂಧನದಲ್ಲಿ ಆ ದೈತ್ಯ ಅವರ ಕಣ್ಣುಗಳಿಗೆ ದ್ರಾವಕ ಹೊಯಿದು ಕುರುಡಾಗಿಸುತ್ತಿದ್ದ, ಕಿವಿಗೆ ಮಯಣ ತುಂಬಿಸಿ ಕಿವುಡಾಗಿಸುತ್ತಿದ್ದ.

ನೋಡುತ್ತಿದ್ದಂತೆ ಕಿಟ್ಟುವಿನ ಮೈಯಿಡೀ ಉರಿದು ಹೋಯಿತು. ಜಾದೂ ಗಾರ ನೋಡಿ ಹಾಕಿ ಮಕ್ಕಳನ್ನು ಇಲ್ಲಿಗೆ ತರುತ್ತಾನೆ, ಈ ಧೂರ್ತ ಅವರ ಕಣ್ಣು ಕಿವಿದು, ಅದಾವುದೋ ಕೆಟ್ಟ ಕೆಲಸ ಮಾಡಿಸುತ್ತಿದ್ದಾನೆ ಎಂದು ಅವನಿಗೆ ಹೊಳೆದು ಹೋಯಿತು. ಆ ಮಕ್ಕಳಲ್ಲಿ ಪುಟ್ಟುವೂ ಇರಬೇಕೆನ್ನುವುದರಲ್ಲಿ ಅನುಮಾನವೇ ಉಳಿ ಯಲಿಲ್ಲ. ಅವನು ಮಿಂಚಿನ ವೇಗದಲ್ಲಿ ದೈತ್ಯನೆಡೆಗೆ ನುಗ್ಗಿ, ಬೆತ್ತದಿಂದ ಅವನ ತಲೆಯ ಮೇಲೆ ಒಂದೇಟು ಹೊಡೆದು, " ಕೆಟ್ಟ ರಾಕ್ಷಸನೇ ನಿಲ್ಲು ! ಇದೇನು ನಿನ್ನ ಕೆಲಸ ? ಎಂದು ಗರ್ಜಿಸಿದ.

ಏಟು ಬೀಳುತ್ತಲೇ ದೈತ್ಯ ವ್ಯಕ್ತಿ ಹುಲಿಯಂತಾದ. ಏನೋ ಮೋಸವಾಗಿದೆ ಎಂದು ಅವನಿಗೆ ಗೊತ್ತಾಯಿತು. " ಯಾರಲ್ಲಿ, ಈ ಕುನ್ನಿಯನ್ನು ಹಿಡಿದು ನನ್ನ ಕಾರಾಗೃಹಕ್ಕೆ ತಳ್ಳಿ. ಕಾದ ಕಬ್ಬಿಣದಿಂದ ಇವನ ಬೆನ್ನಿಗೆ ಬರೆ ಹಾಕಿ " ಎಂದು ಆಜ್ಞಾಪಿಸಿತು.

ಅದಕ್ಕೆಂದೇ ಸಿದ್ಧರಾಗಿದ್ದ ಭಟರು ಮುಂದೆ ಬಂದು ಇಕ್ಕುಳದಂತೆ ಕಿಟ್ಟುವನ್ನು ಹಿಡಿದು ಕೊಂಡರು. ಅವನ ಬೆನ್ನಿಗೆ ಬರೆ ಹಾಕಲು ನಿಲುವಂಗಿಯನ್ನು ಕಳಚಿದರು. ಕಬ್ಬಿಣದ ಸಲಾಕೆ ಕಾದು ಕೆಂಪಾಗಿ ಸಿಗಿ ಸಿಗಿ ಎನ್ನತೊಡಗಿತು. ಸ್ವಲ್ಪ ಹೊತ್ತಿನಲ್ಲಿ ಅವನ ಬೆನ್ನಿಗೆ ಬರೆ ಬೀಳುವುದಿತ್ತು. ಆದರೆ ಯಾವುದೊ ಶಕ್ತಿ ಕಿಟ್ಟುವಿನ ಶರೀರದಲ್ಲಿ ಆವರಿಸಿತು. ತನ್ನನ್ನು ಅವರು ಹಿಡಿದು ನಿಲ್ಲಿಸಿದ ಸ್ಥಳದಲ್ಲಿ ಯಾವುದೊ ದ್ರವ ತುಂಬಿದ ಹಂಡೆಯಿತ್ತು. ಕಿಟ್ಟು ಭರದಿಂದ ಆ ಹಂಡೆಯನ್ನು ಒದ್ದಾಗ ಅದು ನೆಲಕ್ಕೆ ಹೊರಳಿತು.

ಹಂಡೆಯಲಿದ್ದ ದ್ರವ ಒಲೆಯೆಡೆಗೆ ಹೊಳೆಯಾಗಿ ಹರಿಯಿತು. ಆಗ ಆ ದ್ರವಕ್ಕೆ ಬೆಂಕಿ ಹಿಡಿಯಿತು. ಬೆಂಕಿ ಸಾವಿರ ಕೆನ್ನಾಲಿಗೆಗಳನ್ನು ಚಾಚಿ ಉರಿಯತೊಡಗಿತು. ಶಾಲಾಗಿರಿಸಿದ ಬಾಟಲಿಗಳು ಸಟಸಟನೆ ಸಿಟಿಯ ತೊಡಗಿದುವು. ನೂರಾರು ಜಾಯಿ ಕಾಯಿ ಪೆಟ್ಟಿಗೆಗಳಲ್ಲಿ ಅಂತಹ ದ್ರವ ತುಂಬಿದ ಬಾಟಲಿಗಳನ್ನಿರಿಸಲಾಗಿತ್ತು. ಅವು ಹತ್ತಿ ಉರಿಯ ತೊಡಗಿದುವು. ಎಲ್ಲೆಡೆಯೂ ಗಲಭೆ, ಹಾ ಹಾಕಾರ ಕೇಳಿಸಿತು.

ಕಿಟ್ಟುವನ್ನು ಹಿಡಿದಿದ್ದವರು ಅಲ್ಲೇ ಬಿಟ್ಟು ಬೆಂಕಿ ಆರಿಸುವ ಕಾರ್ಯದಲ್ಲಿ ಪ್ರವೃತ್ತ ರಾದರು. ಅದೇ ಸಮಯ ಸಾಧಿಸಿ, ಕಿಟ್ಟು ಕಾದು ಕೆಂಪಾಗಿದ್ದ ಸಲಾಕೆಯನ್ನು ಎತ್ತಿಕೊಂಡು ನೆಲಮಾಳಿಗೆಯ ಬಾಗಿಲಿನೆಡೆಗೆ ವೇಗವಾಗಿ ಓಡತೊಡಗಿದ. ಅವ ನನ್ನು ಯಾರೂ ಗಮನಿಸಲಿಲ್ಲ. ಓಡುತ್ತಲೇ ಅವನು ಹೊರಭಾಗಕ್ಕೆ ಬಂದು ಪಾರಾದ.

ಎಲ್ಲೆಡೆಯೂ ಬೆಳಕು ಹರಿದಿತ್ತು. ಕಿಟ್ಟು ತಡ ಮಾಡದೆ ಪೊಲೀಸ್ ಠಾಣೆಗೆ ಹೋದ. ಇನ್‌ಸ್ಪೆಕ್ಟರರೊಂದಿಗೆ, "ಸರ್, ನನಗೀಗ ಸಶಸ್ತ್ರ ಪೊಲೀಸ್ ಪಡೆಗಳ ಬೆಂಬಲ ಬೇಕಾಗಿದೆ. ರಾಷ್ಟ್ರದ್ರೋಹಿ ಕಾರ್ಯದಲ್ಲಿ ಪ್ರವೃತ್ತವಾದ ಒಂದು ತಂಡ ವನ್ನು ನಾನು ಶೋಧಿಸಿದ್ದೇನೆ" ಎಂದ.

ಇನ್‌ಸ್ಪೆಕ್ಟರ್‌ಗೆ ನಗು ಬಂತು. "ನಿನ್ನಂತಹ ಚೋಟು ಅಂತಹ ಶೋಧನೆ ಮಾಡಿದ್ದೀ? ನಂಬಬಹುದೆ?" ಎಂದು ಕೇಳಿದರು. "ದೇವರಾಣೆಯಾಗಿಯೂ ನಿಜ ಸಾರ್. ನೀವು ಬಂದು ಹಿಡೀರಿ ಸಾರ್. ನನಗೆ ನನ್ನ ಗೆಳೆಯ ಸಿಕ್ಕಿದರೆ ಸಾಕು" ಕಿಟ್ಟು ಎಲ್ಲವನ್ನೂ ವಿವರಿಸಿದ.

ಇನ್‌ಸ್ಪೆಕ್ಟರ್ ತಡಮಾಡದೆ ಸಶಸ್ತ್ರ ಪಡೆಗಳೊಂದಿಗೆ ಭೈರವನ ಗುಡಿಯತ್ತ ಹೊರಟರು. ಕಿಟ್ಟುವೂ ವಾಹನದಲ್ಲಿ ಅವರ ಪಕ್ಕದಲ್ಲೆ ಕುಳಿತುಕೊಂಡ. ಭೈರವನ ಗುಡಿ ತಲುಪುವಾಗ ಅವರ ವಾಹನ ಗಕ್ಕನೆ ನಿಂತುಬಿಟ್ಟಿತು. ಏನು ಮಾಡಿದರೂ ಮುಂದೆ ಹೋಗಲಿಲ್ಲ. "ವಾಹನ ಮುಂದೆ ಹೋಗದಂತೆ ತಡೆಯುವ ಯಾವುದೊ ಚುಂಬಕ ಶಕ್ತಿ ಇಲ್ಲಿ ಇರುವಂತಿದೆ ಸಾರ್. ಇನ್ನು ನಡೆದೆ ಹೋಗಿ" ಎಂದ ಡ್ರೈವರ್.

ತಮ್ಮ ಪಡೆಗಳೊಂದಿಗೆ ಇನ್‌ಸ್ಪೆಕ್ಟರ್ ಕಾಲ್ನಡಿಗೆಯಲ್ಲಿ ಭೈರವನ ಗುಡಿ ತಲುಪಿದರು. ಆಗ ಜಾಯಿಕಾಯಿ ಪೆಟ್ಟಿಗೆ ಹೊತ್ತ ಇಬ್ಬರು ನೆಲಮಾಳಿಗೆಯಿಂದ ಹೊರಬೀಳುತ್ತಿದ್ದರು. ಇನ್‌ಸ್ಪೆಕ್ಟರನ್ನು ಕಾಣುತ್ತಲೇ ಅವರು ಪಿಸ್ತೂಲು ತೆಗೆದು ಗುಂಡು ಹಾರಿಸಿದರು. ಗುಂಡು ಗುರಿ ತಲುಪುವುದರೊಳಗೆ ಕಿಟ್ಟು ಅವರ ಮೇಲೆ ನೆಗೆದು ಕೆಡವಿಬಿಟ್ಟ.

ಇನ್‌ಸ್ಪೆಕ್ಟರ್ ಪೆಟ್ಟಿಗೆಗಳನ್ನು ಪರೀಕ್ಷಿಸಿದಾಗ ಅದರೊಳಗೆ ಶೀಸೆಗಳಲ್ಲಿ ತುಂಬಿಸಿದ ಕಳ್ಳಭಟ್ಟಿ ಪಾನೀಯ ಇತ್ತು!

ಮುಂದಿನ ಕಥೆ ಹೆಚ್ಚಿಲ್ಲ. ಇನ್‌ಸ್ಪೆಕ್ಟರರ ಬುದ್ಧಿವಂತಿಕೆಯಿಂದ ನೆಲಮಾಳಿಗೆಯಲ್ಲಿ ಅಡಗಿದ್ದ ಧೂರ್ತರು ಸಿಕ್ಕಿಬಿದ್ದರು. ಕಳ್ಳಭಟ್ಟಿ ತಯಾರಿಕೆಯ ಪದಾರ್ಥಗಳು, ಅವಕ್ಕೆ ಬೆರೆಸಲು ಸಿದ್ಧವಾಗಿರಿಸಿದ್ದ ಸ್ಪಿರಿಟು ಎಲ್ಲವೂ ಸಿಕ್ಕಿತು.

ಜೊತೆಗೆ ದೈತ್ಯರು ಅಪಹರಿಸಿದ ನೂರಾರು ನತದೃಷ್ಟ ಮಕ್ಕಳು. ಆದರೆ ಕಿಟ್ಟು ಎಬ್ಬಿಸಿದ ಬೆಂಕಿ ಅನಾಹುತದಿಂದಾಗಿ ಪುಟ್ಟುವಿನ ಕಣ್ಣುಗಳಿನ್ನೂ ಉಳಿದುಕೊಂಡಿದ್ದುವು. ತುಂಬ ಹೆದರಿಕೆಯಿಂದ ಕಂಗಾಲಾಗಿದ್ದ ಅವನು ಕಿಟ್ಟುವನ್ನು ತಬ್ಬಿಕೊಂಡು ಗಳಗಳನೆ ಅತ್ತ. ಗೆಳೆಯರಿಬ್ಬರೂ ಇನ್‌ಸ್ಪೆಕ್ಟರರ ಅನುಮತಿ ಪಡೆದು ಹಿಂತಿರುಗುವಾಗ ಅವರು ಕಿಟ್ಟುವನ್ನು ಅಭಿನಂದಿಸಿ, "ಈ ಕೆಲಸದಲ್ಲಿ ನಿನಗೆ ದೊಡ್ಡ ಬಹುಮಾನ ಸಿಗುತ್ತದೆ ಕಿಟ್ಟು! ನಾವು ಕರೆದಾಗ ಬಂದು ನೀವಿಬ್ಬರೂ ಸಾಕ್ಷ್ಯ ಹೇಳಬೇಕು" ಎಂದು ಕಳುಹಿಸಿಕೊಟ್ಟರು.

ಪವಿತ್ರ ಕೃತಿ, ಪವಿತ್ರ ವಾಣಿ, ಪವಿತ್ರ ವಿಚಾರ
ಇವುಗಳೇ ಜೀವಾತ್ಮನನ್ನು ಪರಮಾತ್ಮನ ಕಡೆ ಸೇರಿಸುತ್ತವೆ
ಅಪವಿತ್ರ ಕೃತ್ಯ, ದುಷ್ಕಾರ್ಯ, ಅಶುದ್ಧ ವಿಚಾರ
ಜೀವಾತ್ಮ ಪರಮಾತ್ಮನ ಅಂತರವನ್ನು ಹೆಚ್ಚಿಸುತ್ತವೆ.

—ಶ್ರೀವಾಣಿ

# ಬಹುರೂಪಿ ಚೌಡಯ್ಯ

(ಏಕಾಂಕ ನಾಟಕ)

—ಚನ್ನಪ್ಪ ಎರೇಸೀಮೆ

## ದೃಶ್ಯ–1

(ಬಹುರೂಪಿ ಚೌಡಯ್ಯನ ಮನೆ: ಲಿಂಗಲೀಲಾ ವಿನೋದಚಿತ್ತನಾಗಿ ಹಾಡುತ್ತಿದ್ದಾನೆ)

ಚೌಡಯ್ಯ : ರಾಗ–ರಾಮಕ್ರಿಯಾ

ಅಲ್ಲಿಯ ಬಹುರೂಪು ಇಲ್ಲಿಗೆ ಬಂದಿತ್ತು;
ಇಲ್ಲಿಯ ಬಹುರೂಪು ಎಲ್ಲಿಯಡಗಿತ್ತೋ ?
ಎನ್ನ ಬಹುರೂಪವ ಬಲ್ಲವರಾರೋ ರೇಕಣ್ಣಪ್ರಿಯನಾಗಿನಾಥ
ಇಂದು ಬಂದ ಬಹುರೂಪವ ನೋಡಿರಯ್ಯಾ;
ಪತಿಯ ಹೊದ್ದದೆ, ಮತಿಯ ಹೊದ್ದದೆ,
ಸ್ಥಿತಿಯ ಹೊದ್ದದೆ, ಸ್ಥಾನವ ಹೊದ್ದದೆ;
ಐವರು ಕಟ್ಟಿದ ಕಟ್ಟಳೆಯ ಮೀರಿ,
ನಾನಾಡುವೆ ಬಹುರೂಪವ; ರೇಕಣ್ಣಪ್ರಿಯನಾಗಿನಾಥ.

ರೇಕಣ್ಣ : ಆಹಾ! ಮಹಾಶರಣನಾದ ಚೌಡಯ್ಯ ಲಿಂಗಪೂಜಾ ವಿನೋದ ಚಿತ್ತನಾ[ಗಿ] ತನ್ನ ಪ್ರೀತಿಯ ರಾಮಕ್ರಿಯಾ ರಾಗರಸಮಗ್ನಚಿತ್ತನಾಗಿದ್ದಾನೆ. ಇವನ[ನ] ಭಾವ ಸಮಾಧಿಯ ಭಂಗ ಗೊಳಿಸಲಾಗದು.

ಚೌಡಯ್ಯ: ಲಿಂಗಪೂಜಾನಂದದಲ್ಲಿ ಇನ್ನೊಂದು ಆನಂದವು ಸಿಹಿಗೆ ಸಿಹಿ ಬೆರೆತಂತೆ ಹೃದಯವನ್ನುಕ್ಕಿಸುವುದಲ್ಲಾ ! ರೇಕಣ್ಣ ಗುರುದೇವ ಬಂದಿರಬಹುದೇ ?

ರೇಕಣ್ಣ : ಹೌದು ಹೌದು ಚೌಡಯ್ಯ ನಿನ್ನ ಗುರುದೇವ ರೇಕಣ್ಣನೇ ಬಂದಿದ್ದಾನೆ. ನಿನ್ನ ಭಾವ ಸಮಾಧಿಯನ್ನು ಭಂಗಗೊಳಿಸಲಾರದೆ ಹೊರಗೆ ನಿಂತೇ ನಿನ್ನ ರಾಮಕ್ರಿಯಾ ರಾಗರಸದೊಳೋಲಾಡಿದೆ.

ಚೌಡಯ್ಯ: ಕೃತಾರ್ಥನಾದೆ ಗುರುದೇವ ಇಗೋ ಸಾಷ್ಟಾಂಗ ನಮಸ್ಕಾರ.

ರೇಕಣ್ಣ : ಚೌಡಯ್ಯ, ನಿನ್ನ ಕಲಾ ಜೀವನವೇ ಈಶ್ವರಪೂಜೆ. ನಾಟ್ಯಸಂಗೀತಾದಿ ಕಲೆಗಳು ನಿನ್ನನ್ನಾಶ್ರಯಿಸಿ ಪವಿತ್ರವಾದುವು. ನೀನು ನಿನ್ನ ಬಹುಮುಖ ಕಲಾಜೀವನದಿಂದ ಲೋಕಜೀವನವನ್ನು ಬೆಳಗಬೇಕು. ಅನ್ನ ಬಟ್ಟೆ ಗಳಷ್ಟೇ ಮಾನವ ಜೀವಿತದ ಮುಖ್ಯ ಸಾಧನಗಳಲ್ಲ. ಶುದ್ಧ ರಸಗ್ರಹಣವೂ ಒಂದು. ಶಿವನು ರಸಸ್ವರೂಪನು. ಸಾಕ್ಷಾತ್ ಅವನೇ ನಾಟ್ಯಮೂರ್ತಿ. ಸಮಸ್ತ ಬ್ರಹ್ಮಾಂಡವೇ ಅವನ ಆಂಗಿಕ; ವೇದಾದಿ ಸಮಸ್ತ ವಾಙ್ಮಯವೇ ವಾಚಿಕ; ಚಂದ್ರತಾರಾದಿಗಳೇ ಆಹಾರ್ಯಗಳಲ್ಲವೇ ?

ಚೌಡಯ್ಯ: ಹೌದು ರೇಕಣ್ಣ ಪ್ರಭು, ಹೌದು !

ರಾಗ–ರಾಮಕ್ರಿಯಾ :

ಆಂಗಿಕಂಭುವನಂ ಯಸ್ಯ, ವಾಚಿಕಂ ಸರ್ವವಾಙ್ಮಯಂ,
ಆಹಾರ್ಯಂ ಚಂದ್ರತಾರಾದಿ, ತನ್ನಂನಮಃಸಾತ್ವಿಕಂ ಶಿವಂ,

ರೇಕಣ್ಣ : ನಿನ್ನಂಥ ಶ್ರೇಷ್ಠಕಲಾವಿದನ ಬಾಯಿಗೆ ಬಿದ್ದು ಆ ಶ್ಲೋಕ ಪವಿತ್ರ ವಾಯಿತು. ಅದಿರಲಿ. ಚೌಡಯ್ಯ ಮೊನ್ನೆ ಕಳೆದ ಶಿವರಾತ್ರಿಯಂದು ಪ್ರದರ್ಶಿಸಿದ ನಿನ್ನ ಕಲಾಸೌಂದರ್ಯ ಅತ್ಯದ್ಭುತ. ಭೃಂಗಿಯ ಕುಣಿತ ಜನರನ್ನು ನಕ್ಕುನಗಿಸಿತು. ರತಿಯ ಪ್ರಲಾಪ ಕಣ್ಣೀರ ಕೋಡಿಯನ್ನೇ ಹರಿಸಿತು. ಕುಂಬಾರ ಗುಂಡಯ್ಯನ ಮುಂದೆ ನೃತ್ಯ ಮಾಡಿದ ಶಿವನ ನಾಟ್ಯ ನನ್ನ ಕಣ್ಮುಂದೆ ಕಟ್ಟಿದಂತೆ ಇದೆ. ನಿನ್ನ ಮತ್ತು ನಿನ್ನ ತಂಡದ ಜಾತಿಗಾರರ-ಅನೇಕ ವೇಷ, ಕಿಳ್ಳಿಕೇತ, ಜೋಗಿ, ಗೊಂದಲ, ಡೊಂಬ ಮೊದಲಾದ ಆಟಗಳೂ, ನೃತ್ಯ, ನಾಟ್ಯಾದಿ ಭರತ ವಿದ್ಯೆಗಳೂ ಸ್ವರ್ಗೀಯ ವೆನಿಸಿದ್ದವು.

ಚೌಡಯ್ಯ: ಎಲ್ಲವೂ ತಮ್ಮ ಕೃಪೆ.

(ಚೌಡಯ್ಯ ಹಾಡುವನು)

ರಾಗ–ಭೀಮಪ್ಲಾಸ್

ಹೆಸರಿಲ್ಲದ ಜವನಿಕೆಯ ಮರೆಯಲ್ಲಿ ಬಂದು;
ಅಸುವಿನ ಬಹುರೂಪನಂ ತೊಟ್ಟು ಪಶುಪತಿಯ ಅವತಾರವನ್ನಾಡುತ್ತಿರಲಾಗಿ
ಪಸುಬೆಯ ತೆರೆ ಹರಿದು, ಅಸು ದೆಸೆಯಲ್ಲಿ ಇಲ್ಲ ಎಂದ ರೇಕಣ್ಣ
ಪ್ರಿಯನಾಗಿ ನಾಥನಲ್ಲಿ ಪುರೇ, ಪುರೇ ಎನುತಿರ್ದೆನು.

ರೇಕಣ್ಣ : ನಿನ್ನ ಕಲಾ ಜೀವನಕ್ಕೆ ಸಿದ್ಧಾಂತ ಸಮ್ಮತ ರೂಪಕ ಕೊಟ್ಟು ಜೀನ್ನಾಗಿ ಹಾಡಿದೆ. ನಿನ್ನ ಪರಿಶುದ್ಧ ಬಹುಮುಖ ಕಲಾಜೀವನವೇ ನಿನ್ನ ಕರ್ಮ ಯೋಗ ಚೌಡಯ್ಯ; ಅದನ್ನರಿತ ಅರಿವೇ ಜ್ಞಾನ. ನಿನ್ನಲ್ಲಿ ಕ್ರಿಯಾ ಜ್ಞಾನಗಳು ಸಮರಸಗೊಂಡಿವೆ. ಇದರಿಂದ ನಿನ್ನ ಹಸುಬೆಯ ತೆರ ಹರಿದುದರಲ್ಲೇನಾಶ್ಚರ್ಯ! ನಿನ್ನಿಂದಲೇ ಕಲಾ ಪ್ರಪಂಚದಲ್ಲೊಂದು ಮಹಾಕ್ರಾಂತಿಯಾಗಲು ಸಾಧ್ಯ.

ಚೌಡಯ್ಯ: ಶಿಷ್ಯವಾತ್ಸಲ್ಯ ನನ್ನನ್ನು ಹೊಗಳಿ ಹೊಗಳಿ ಹೊನ್ನಶೂಲಕ್ಕೇರಿಸುತ್ತಿದೆ.

ರೇಕಣ್ಣ : ನಿನ್ನ ಬೆಳಕಿನಿಂದ ಮೂರು ಲೋಕಗಳು ಬೆಳಗುತ್ತವೆ ಎಂದು ಸೂರ್ಯನಿಗೆ ಹೇಳಿದರೆ ಅದು ವೃಥಾ ಹೊಗಳಿಕೆಯೇ! ಕಲೆ ಪರಿಪೂರ್ಣವಾಗಿ ವ್ಯಕ್ತಿ ಯಲ್ಲಿ ಅವಿರ್ಭಾವವಾಗುವುದೊಂದು ದೊಡ್ಡ ತಪಸ್ಸಿನಿಂದ. ಕಲಾ ಯೋಗಿಯ ಕಲೆ ಅವನ ಲಿಂಗಪೂಜೆ; ಜಂಗಮದಾಸೋಹ. ಆದ್ದರಿಂದ ನಿಮ್ಮಂಥವರಿಂದಲೇ ಲೋಕದ ಕಲಾಪ್ರಪಂಚದಲ್ಲೊಂದು ಕ್ರಾಂತಿ ಯಾಗಲು ಸಾಧ್ಯವೆಂದು ಹೇಳಬೇಕಾಯಿತು.

ಚೌಡಯ್ಯ: ರೇಕನಾಥದೇವಾ, ನಿಮ್ಮಾಣತಿಯೆನ್ನ ಶಿರದ ಮೇಲೆ.

ರೇಕಣ್ಣ : ಚೌಡಯ್ಯ, ಇಂದು ನಾಡಿನ ಪ್ರಸಿದ್ಧ ಕಲಾವಿದರಾದ ನೃತ್ತ, ನೃತ್ಯ, ವಾದ್ಯ, ನಾಟಕ, ವಿದ್ಯಾವಿಶಾರದರು, ಕಿಳ್ಳಿಕೇತ, ಬುಡುಬುಡಿಕೆ, ಗೊಂದಲಿಗ, ಜೋಗಿ, ಜಾತಿಗಾರ, ಚೌಡಿಕೆ, ಗೊರವ, ಸಿದ್ಧ, ಡೊಂಬ, ದುಂಡುಚಿ ಪ್ರದರ್ಶನ ಚತುರರೂ ಅವರ ಕಲೆಗಳೂ ಕೀಳೆಂದು ಪರಿಗಣಿಸಲ್ಪಟ್ಟು ಅವರು ಸಮಾಜದ ಅವಹೇಳನಕ್ಕೊಳಗಾಗಿದ್ದಾರೆ. ಆ ಎಲ್ಲಾ ಕಲೆಗಳನ್ನು ಮೈಗೂಡಿಸಿಕೊಂಡು ಬಹುರೂಪಿ ಚೌಡಯ್ಯನೆಂಬ ಅನ್ವರ್ಥಕ ನಾಮವಿಖ್ಯಾತನಾದ ನೀನು ಆ ಕಲಾವಿದರನ್ನೆಲ್ಲ ಸಂಘಟಿಸಿ, ಅವರನ್ನೆಲ್ಲಾ ಭಕ್ತರನ್ನಾಗಿ ಮಾಡಿ ಅವರ ವ್ಯಕ್ತಿಗಳಿಗೆ ಕಾಯಕದ ಮುದ್ರೆ ಯನ್ನೊತ್ತು. ಅವರು ಗುರು ಲಿಂಗ ಜಂಗಮ ಸೇವಾದುರೀಣರೆನಿಸಿ ಲೋಕದಲ್ಲಿ ತಲೆಯೆತ್ತಿ ಬಾಳಿ ಲೋಕದ ಭಕ್ತಜನಮನೋಭೂಮಿಯಲ್ಲಿ ಸೌಂದರ್ಯೋಪಾಸನೆಯ ಸುಂದರ ಸಸಿಗಳನ್ನೂರಲಿ. ಆ ಸಸಿಗಳ ಫಲಪುಷ್ಪಗಳು ಈಶ್ವರಾರ್ಪಿತಗೊಳ್ಳಲಿ. ಲೋಕ ಉದ್ಧಾರವಾಗಲಿ.

ಚೌಡಯ್ಯ: ಗುರುವೇ, ಸೌಂದರ್ಯವೆಂದರೇನು? ಲೋಕೋದ್ಧಾರಕ್ಕೆ ಅವು ಹೇಗೆ ಪೂರಕ? ಕಲೆಗಳೆಲ್ಲ ಈಶ್ವರಾರ್ಪಿತ ಹೇಗೆ?

ರೇಕಣ್ಣ : ಸೌಂದರ್ಯವೆಂಬುದು ಮನಸ್ಸಿಗುಂಟಾಗುವ ಅವ್ಯಕ್ತ ಆನಂದ. ಅದು ನಿರಾಕಾರ. ಇಂಥ ನಿರಾಕಾರ ಪರಬ್ರಹ್ಮಸ್ವರೂಪವಾದ ಸೌಂದರ್ಯವನ್ನು ಸಾಕಾರದ ಕಲಾ ಪರಿಣತಿಯಿಂದ ಅಭಿವ್ಯಕ್ತಗೊಳಿಸಬೇಕು. ಸೌಂದರ್ಯಾನುಭವ ಆತ್ಮೋನ್ನತಿಯ ಸಾಧನ. ಅದು ಸಂಸ್ಕೃತಿಯ ಪ್ರತೀಕ. ಈ ಸೌಂದರ್ಯೋಪಾಸನೆಯೇ ಮಾನವನ ಊರ್ಧ್ವಗಾಮಿತ್ವದ ಪ್ರವೃತ್ತಿಯಲ್ಲಿ ಬಹು ಮುಖ್ಯವಾದ ಅಂಶ. ಇದಿಲ್ಲದಿದ್ದಲ್ಲಿ ವ್ಯಕ್ತಿ ಅಥವಾ ರಾಷ್ಟ್ರ ಸಂಸ್ಕೃತಿ ಪೂರ್ಣವೆನಿಸುವುದಿಲ್ಲ. ಇದರಿಂದುಂಟಾಗುವ ಆನಂದಕ್ಕೆ ಬ್ರಹ್ಮಾನಂದ ಸಹೋದರ ಎಂದೂ ಕರೆಯಲಾಗುತ್ತಿದೆ. ಇಂಥ ನಿರ್ಲಿಪ್ತ ಆನಂದಾನುಭೂತಿಯಿಂದಲೇ ಮಾನವ ಚೇತನಕ್ಕೆ ಅಮೃತತ್ವ.

ಶಿವಯ್ಯ: ಗುರುದೇವನಾಣತಿಯಂತೆ ನನ್ನ ಜೀವಿತ ಸರ್ವಸ್ವವನ್ನೂ ಕಲೋಪಾಸನೆಗೆ ಮೀಸಲಿಡುವೆ. ನಾಡಿನ ಸಮಸ್ತ ಕಲೆ ಮತ್ತು ಕಲೆಗಾರರ ಉನ್ನತಿಗೆ ಯತ್ನಿಸುವೆನು.

ರಾಗ– ಪಟದೀಪ

ಎಂಬತ್ತನಾಲ್ಕು ಲಕ್ಷ ಬಹುರೂಪ ಛಂದ, ಛಂದದಲ್ಲಿ ಹಾಡಿ ಬಂಧುಗಳ
ಮೆಚ್ಚಿಸಬಂದೆ, ಅವರು ಬಹುರೂಪಂದವನರಿಯರು, ರೇಕಣ್ಣ,
ಪ್ರಿಯ ನಾಗಿನಾಥನಲ್ಲಿ ಬಹುರೂಪದಿಂದ ನಿಚ್ಛಂದವಾಯಿತ್ತು .

ತಂರಗಾನ: (ಈ ಹಾಡಿನ ಹಿನ್ನೆಲೆಯಲ್ಲಿ ಮೊದಲು ಕ್ಷೀಣಧ್ವನಿ, ಮಧ್ಯೇಏರು, ಪುನಃ ಕ್ಷೀಣವಾಗುತ್ತ ಹೋಗಬೇಕು.)

ಭಲೇ ಭಲೇ ಭಾಪುರೇ, ಪುರೇ ಪುರೇ ಭಾಪುರೇ;
ಸತ್ಯ ಶುದ್ಧ ಶರಣ ಜನದ ಮನದ ತೋಷಭಾಪುರೇ,
ಕಲೆಯ ಬಲೆಯ ಬೀಸಲೆಂದು ಬಂದೆವೀನಗರಕೆ,
ಬಲೆಯ ಬೀಸಿ ಸರ್ವ ಮನವ ಹಿಡಿಯಲೆಂದು ನಗರಕೆ,
ರಾಗರಸದ ಭಾವವೀವ ನೃತ್ಯನಾಟ್ಯ ತಂಡವು,
ಹಾಡಿ ಪಾಡಿ ಗಾನರಸವ ಹರಿಪ ನೃತ್ಯ ತಂಡವು,
ಡೊಂಬ ಹಾವುಗರ ಜಾತಿಗಾರರಾಟ ತಂಡವು,
ಬುಡಬುಡಿಕೆಯ ಕೊಡವಿನುಡಿಸಿ ಸೊಗವನೀವ ತಂಡವು,
ಕಿಳ್ಳಿಕೇತ ಜೋಗಿಸಿದ್ಧ ಕಲಾ ಮೇಳ ಬಂದಿದೆ,
ದೇಶ ದೇಶ ತಿರುಗಿ ಶರಣ ಧರ್ಮಧ್ವಜವನೆತ್ತಿದೆ,
ಗೊರವ ಗೊಂದಲಿಗರು ಚೌಡಿಕೆಯಲಿ ಕಲೆಯ ತೋರಿಸಿ,
ಲೋಕ ಜೀವನಕ್ಕೆ ಶಿವನ ಸೊಗವನೀಯಲಾಸಿಸಿ, ಭಲೇ........

(ಕೊಟ್ಟಲ ಕೆರೆಯ ಅರಸು ರಾಮದೇವನ ಸಭೆ. ಸಭೆಯಲ್ಲಿ ಆಸ್ಥಾನ ವಿದ್ವಾನ್ ಗಾನವಿದ್ಯಾಗಜೇಂದ್ರಸಿಂಹ ಅಚ್ಯುತನೊಡನೆ ಅರಸನ ಸಂಭಾಷಣೆ)

ರಾಮದೇವ: ಆಸ್ಥಾನದ ಗಾನವಿದ್ಯಾವಿಶಾರದರಾದ ಅಚ್ಯುತರೇ, ನಿನ್ನೆ ಮೊನ್ನೆ ನಮ್ಮ ಕೊಟ್ಟಲಗೆರೆ ನಗರಕ್ಕೆ ಬಂದು ನಗರದ ಬೀದಿಬೀದಿಗಳಲ್ಲಿ ಸಂದಿಗೊಂದಿಗಳಲ್ಲಿ ಅನೇಕ ಬಗೆಯ ಜಾತಿಗರ ವಿದ್ಯೆ, ಡೊಂಬರಾಟಗಳೇ ಮೊದಲಾದ ಕಲಾಪ್ರದರ್ಶನ ಮಾಡಿ, ಜನಪ್ರೀತಿ ಗಳಿಸಿರುವ ಕಲಾ ತಂಡದವರ ಪ್ರದರ್ಶನಗಳನ್ನು ನೋಡಿದಿರಾ !

ಅಚ್ಯುತ : ರಾಮದೇವ ಭೂಪಾಲ, ಜಾತಿಗರು ಜಾತಿಗರೇ, ಕುಲಜನ ವಿದ್ವಾಂಸರು ಕುಲೀನರೇ, ಬುಡುಬುಡಿಕೆ, ಸುಡುಗಾಡು ಸಿದ್ಧ, ಗೊದಲ, ಕಿಳ್ಳಿಕೇತ, ಡೊಂಬ, ಗೊರವ, ಪಾತರ ಮೊದಲಾದ ಬೀದಿಯ ಕುಣಿತದ ಕೀಳು ಜನದೊಡನೆ ಕೀಳುದರ್ಜೆಯ ಕಲಾಪ್ರದರ್ಶನ ಮಾಡಲು ರೇಕಳಿಕೆಯಿಂದ ಚೌಡಯ್ಯನೆಂಬ ಜಾತಿಗಾರ ಬಂದಿರುವನಂತೆ. ಮಹಾ ಸ್ವಾಮಿಯವರ ಆಸ್ಥಾನವಿದ್ವಾಂಸನೆನಿಸಿ 'ಗಾನವಿದ್ಯಾಗಜೇಂದ್ರಸಿಂಹ'ನೆಂಬ ಗೌರವಕ್ಕೆ ಪಾತ್ರನಾದ ನಾನು ಆ ಸಾಮಾನ್ಯ ಕಲಾ ಪ್ರದರ್ಶಕರ ಆಟ ನೋಡಲೇ?

ರಾಮದೇವ: ಹಾಗೆನ್ನುವಂತಿಲ್ಲ ಅಚ್ಯುತರೇ, ವಿವಿಧ ವಿದ್ಯಾಪ್ರದರ್ಶನ ಮಾಡುವ ಅವರೆಲ್ಲ ಮಹಾ ಭಕ್ತರಂತೆ ! ವಿವಿಧ ಕಲಾಜೀವನದಲ್ಲಿ ಪರಿಣತಿ ಪಡೆದವರಂತೆ, ಅವರು ನಮ್ಮ ನಗರದ ಬಹಿರುದ್ಯಾನದ ಕೆರೆಯ ದಂಡೆಯ ಮಾವಿನ ತೋಪಿನಲ್ಲಿ ಬೀಡು ಬಿಟ್ಟಿರುವರಂತೆ, ಆ ಬೀಡು ಶಿವಲೋಕವೇ ಭೂಮಿಗೆ ಇಳಿದುಬಂದ ಹಾಗೆ ಇದೆಯೆಂದು ಇದೀಗ ಗುಪ್ತಚಾರರಿಂದ ಬಂದ ಸುದ್ದಿ. ಆ ಎಲ್ಲಾ ಜಾನಪದ ಕಲಾಮೇಳಕ್ಕೆ ಚೌಡಯ್ಯನೆಂಬುವನು ನಾಯಕನಂತೆ. ಅವನು ಶಿವಪೂಜಾ ಸಮಯದಲ್ಲಿ ಹಾಡುವ ಸಂಗೀತ ಅದಕ್ಕೆ ಮೇಳಗೊಂಡು ಉಗ್ಗಡಿಸುವ ತತ, ಸುಷಿರ, ಅವನದ್ಧ, ಘನಾದಿ ವಾದ್ಯ ವಿಶೇಷಗಳು ಗಂಧರ್ವಗಾನವನ್ನು ಕೀಳುಗೊಳಿಸುವುವಂತೆ ಕೇವಲ ಒಂದೆರಡೇ ದಿನಗಳಲ್ಲಿ ತಮ್ಮ ಕೊಟ್ಟಲಕೆರೆ ನಗರದ ಜನಜೀವನದ ಮೇಲೆ ಅಗಾಧ ಪರಿಣಾಮವನ್ನೇ ಬೀರಿರುವರಂತೆ ಅವರು !

ಅಚ್ಯುತ : ನಾನು ನಂಬಲಾರೆ; ಜಾತಿಗರು, ಪಾತರದವರು, ಸಂಗೀತದವರೇ ಮೊದಲಾದವರು ಏನೇ ನೈಪುಣ್ಯ ತೋರಿದರೂ, ಮಹಾ ಸ್ವಾಮಿಯವರ ಆಸ್ಥಾನದ 'ಗಾನವಿದ್ಯಾಗಜೇಂದ್ರಸಿಂಹನ' ಮೇಳವನ್ನು ಸರಿಗಟ್ಟಲು ಶಕ್ಯವೇ ಇಲ್ಲ.

(ಸೇವಕನ ಪ್ರವೇಶ)

ಸೇವಕ : ಭರತಾದಿ ವಿದ್ಯಾಪರಿಣತಜನವನವಸಂತ; ವಿತರಣಜನನಿರ್ಜಿತಭೂಪ: ಕೊಟ್ಟಲಕೆರೆ ಪುರವರಾಧೀಶ, ರಾಮಭೂಪಾಲ ಬಹು ಪರಾಕ್.

ರಾಮದೇವ: ವಿಶೇಷ ವಿಷಯವೇನು ಸೇವಕ ?

ಸೇವಕ : ಮಹಾರಾಜ, ರೇಕಳಿಕೆಯಿಂದ ಬಹು ರೂಪಗಳನ್ನಾರುವ ಜಾತಿಗರ ತಂಡ ದೊಡನೆ ಚೌಡಯ್ಯನೆಂಬ ಕಲಾವಿದ ಒಡ್ಡೋಲಗದಲ್ಲಿ ಮಹಾಸ್ವಾಮಿ ಯವರ ಸಂದರ್ಶನಲಾಭ ಪಡೆಯಲು ಬಂದಿದ್ದಾನೆ. ಅಪ್ಪಣೆಯಾದರೆ ಕರೆತರುತ್ತೇನೆ.

ರಾಮದೇವ: ಆ ಕಲಾವಿದರನ್ನೆಲ್ಲಾ ಒಳಗೆ ಬಿಡು.

ಚೌಡಯ್ಯ: ಮಹಾಸ್ವಾಮಿಗಳಿಗೆ ಜಯವಾಗಲಿ !

ರಾಮದೇವ: ಬಹುರೂಪಿ ಚೌಡಯ್ಯನವರೆಂದರೆ ನೀನೆಯೋ ?

ಚೌಡಯ್ಯ: ಹೌದು ಮಹಾರಾಜ.

ರಾಮದೇವ: ಮಹಾರಾಜ ರಾಮದೇವರನ್ನು ಕಾಣಬಂದ ಉದ್ದೇಶ ?

ಚೌಡಯ್ಯ: ಮಹಾಪ್ರಭುಗಳ ಸಮ್ಮುಖದಲ್ಲಿ ನಮ್ಮ ನಮ್ಮ ಕಾಯಕ ಪ್ರದರ್ಶಿಸಲು ಇಚ್ಛಿಸಿ.

ರಾಮದೇವ: ನಿಮ್ಮ ಊರು ?

ಚೌಡಯ್ಯ: ಕರ್ನಾಟಕ ರಾಜ್ಯದ ರೇಕಳಿಕೆ

ರಾಮದೇವ: ಈ ನಿಮ್ಮ ತಂಡದ ವಿವಿಧ ಜನರು ?

ಚೌಡಯ್ಯ: ದೇಶದ ಮೂಲೆ ಮೂಲೆಗಳಿಂದ ಬಂದು ನನ್ನೊಡನೆ ಸೇರಿ ಕಲಾ ಪ್ರದರ್ಶನ ಮಾಡುವ ಮಹಾ ಶರಣ ಸಂದೋಹ.

ರಾಮದೇವ: ನಿಮ್ಮ ತಂಡದಲ್ಲಿ ಯಾವ ಯಾವ ಕಲಾ ಪ್ರದರ್ಶಕರಿದ್ದಾರೆ ?

ಚೌಡಯ್ಯ: ಕಿಳ್ಳಿಕೇತ, ಡೊಂಬ, ಬುಡುಬುಡಿಕೆ, ಸಿದ್ಧ, ಗೊರವ, ಗೊಂದಲಿಗ, ಜಾತಿಗ, ನೃತ್ತ, ನೃತ್ಯ, ನಾಟ್ಯಗಾನ ವಿಶಾರದರೆಲ್ಲ ಇದ್ದಾರೆ.

ರಾಮದೇವ: ಇವರನ್ನೆಲ್ಲ ಮಹಾ ಶರಣರೆನ್ನುವಿರಲ್ಲ !

ಚೌಡಯ್ಯ: ಹೌದು ಪ್ರಭು, ಕಾಯಕ ಸದ್ಭಾವಿಗಳೆಲ್ಲ ಮಹಾಶರಣರೇ, ಇವರ ಕಾಯಕ ಜೀವನ ದಾಸೋಹಸದ್ಭಾವದ್ದು.

ರಾಮದೇವ: ಕಾಯಕ ಸದ್ಭಾವ ದಾಸೋಹ ಎಂದರೆ ?

ಚೌಡಯ್ಯ: ಈಶ್ವರ ತೃಪ್ತ್ಯರ್ಥವಾಗಿ ಆಚರಿಸುವ ಪರಿಶುದ್ಧ ಕ್ರಿಯಾಚಾರವೆ ಕಾಯಕ. ಇಂಥ ಸತ್ಯ ಶುದ್ಧ ಕಾಯಕದಿಂದ ಗಳಿಸುವ ದ್ರವ್ಯವನ್ನು ಆತ್ಮಕಲ್ಯಾಣಕ್ಕೂ, ನಿರ್ವಂಚಕ ಭಾವದಿಂದ ಲೋಕ ಕಲ್ಯಾಣಕ್ಕೂ ಅರ್ಪಿಸಿ, ನಿರಹಂಭಾವ ಸಿರೀಹಂಭಾವದಿಂದ ಕೂಡಿದ ಗುರುಲಿಂಗ ಜಂಗಮ ಸೇವಾಧುರೀಣರೇ ದಾಸೋಹಿಗಳು. ಅವರ ಕ್ರಿಯೆಯಲ್ಲಿ ಜ್ಞಾನ ; ಜ್ಞಾನವೆಲ್ಲ ಕ್ರಿಯೆ.

ರಾಮದೇವ: ಜ್ಞಾನಕ್ರಿಯೆ ಎರಡೂ ಹೇಗೆ ಒಂದು ? ಮೇಲಾಗಿ ಡೊಂಬ ಜಾತಿಗರೇ ಮೊದಲಾದ ಕೀಳು ಕುಲದವರು ಮಹಾ ಶರಣ ಸ್ಥಾನಕ್ಕೇರಲು ಸಾಧ್ಯವೇ ? ನಿಮ್ಮ ಮಾತುಗಳೇ ವಿಚಿತ್ರ

ಚೌಡಯ್ಯ: ಶರಣರ ಮಾರ್ಗವೇ ಇಂದಿನ ಜಗತ್ತಿಗೆ ವಿಚಿತ್ರ, ರಾಮದೇವ ಮಹಾ ರಾಜ ಕೇಳು, ಗುಣದಲ್ಲಲ್ಲದೆ ವೃತ್ತಿಯಲ್ಲಿ ಕೀಳುಮೇಲಿಲ್ಲ. ಯಾವ ವೃತ್ತಿಯನ್ನೇ ಮಾಡಲಿ ಅದನ್ನು ಈಶ್ವರ ಸೇವೆಯೆಂದು ಭಾವಿಸಿ ಚಿತ್ತ ಶುದ್ಧಿಯಿಂದ ಮಾಡಿದರೆ ಅದೇ ಜ್ಞಾನವಾಗುತ್ತದೆ, ಆ ಕಾಯಕವೇ ಕೈಲಾಸ. ಸೂರ್ಯ ಬೆಳಕು ನೀಡುವ ಕ್ರಿಯೆಯನ್ನು ಬೇಕೆಂದೇ ಮಾಡುವು ದಿಲ್ಲ, ಬೇಡವೆಂದರೆ ಬಿಡುವುದೂ ಇಲ್ಲ. ಬೆಳಕು ಜ್ಞಾನ, ಬೆಳಕು ನೀಡುವಿಕೆಯೇ ಕ್ರಿಯೆ. ಅವನು ಬೆಳಕೂ ಆಗಿದ್ದಾನೆ ಕ್ರಿಯೆಯೂ ಆಗಿದ್ದಾನೆ. ಜ್ಞಾನ ಕ್ರಿಯೆಗಳೆರಡೂ ಒಂದು ಸ್ಥೂಲ, ಒಂದು ಸೂಕ್ಷ್ಮ ಅಷ್ಟೆ. ಒಂದೆಂಬನೆ ಎರಡು ; ಎರಡೆಂದೆನೆ ಒಂದು. ಗಟ್ಟಿ ದುಪ್ಪ ತಿಳಿದುಪ್ಪವಿದ್ದಹಾಗೆ. ನನ್ನ ಈ ಕಲಾ ಜೀವಿಗಳೆಲ್ಲ ಅಂದು ದಿವ್ಯ ಮಾರ್ಗದಲ್ಲಿ ತಮ್ಮ ಕಲಾ ಪ್ರದರ್ಶನ ಮಾಡುತ್ತಾರೆ. ಡೊಂಬ ನಾಗಲಿ, ಪಾರದವನಾಗಲಿ, ಹಾವಾಡಿಗನಾಗಲಿ, ಅವೆಲ್ಲಾ ವೃತ್ತಿ ಯಿಂದ ಬಂದ ಹೆಸರು. ಇವರೆಲ್ಲರ ಜಾತಿ ಭಕ್ತ ಜಾತಿ.

ರಾಮದೇವ: ಹೋಗಲಿ ಬಿಡಿ, ನೀವು ಪ್ರದರ್ಶಿಸುವ ಪ್ರದರ್ಶನಗಳಾವುವು ?

ಚೌಡಯ್ಯ: (ರಾಗ—ಯಮುನ ಕಲ್ಯಾಣ)
ಚಿತ್ತಾಪಧಾನದಿಂದಾಡಬಂದೆ ಸತ್ಯಶರಣರ ಮುಂದೆ
ಶುಕ್ಲ ಶೋಣಿತವೆಂಬಾಯಕ್ಕೆ ಮೆಟ್ಟಿ ತುತ್ತ ತುದಿಯನೇರಿ,
ಕೈಬಿಟ್ಟಾಡುತ್ತಿದ್ದೇನೆ, ತುಟ್ಟದ ಹೆಜ್ಜೆಯ ಮೆಟ್ಟದೆ
ನೋಡುವ ನಿಷ್ಠೆವಂತರ ದೃಷ್ಟಿ ಪಲ್ಲಟವಾಗದಂತೆ
ನೋಡದಿರ್ದಡೆ ಲಾಗುವೆತ್ತ ಹೋಯಿತ್ತೋ ರೇಕಣ್ಣಪ್ರಿಯನಾಗಿನಾಥ
ಹೀಗೆ ಡೊಂಬರ ಕುಣಿಯುತ್ತೇನೆ.

ರಾಮದೇವ: ಭಲೆ, ಸ್ವರ್ಗೀಯ ಸಂಗೀತಕಲಾನೈಪುಣ್ಯದೊಡನೆ, ಅದ್ಭುತ ಆಧ್ಯಾತ್ಮ ವಿದ್ಯೆಯನ್ನೇ ಆಧರಿಸಿ ಬೆಡಗಿನಲ್ಲೇ ನುಡಿಯುತ್ತಿದ್ದೀರಿ. ಆಮೇಲೆ?

ಚೌಡಯ್ಯ: (ರಾಗ—ಭೀಮಪ್ಲಾಸ್)
ಹುಟ್ಟುವಾತ ಮದ್ದಳೆಯ ಕಟ್ಟಿದ, ಸಡೆವಾತತಾಳವನೊತ್ತಿದ
ಬಿಡುವಾತ ಶ್ರುತಿಯನೆತ್ತಿದ:
ತದ್ಧಾ, ತಿದ್ಧಾ ಇತ್ತಲೇ ಉಳಿದಿತ್ತು; ರೇಕಣ್ಣ ಪ್ರಿಯನಾಗಿನಾಥ
—ಹೀಗೆ ನೃತ್ಯವನ್ನಾಡುವೆ. ಒಂದಲ್ಲ ಎರಡಲ್ಲ ನನ್ನವು ಬಹುರೂಪಗಳು.

ರಾಮದೇವ: ಭಲೇ ಕೇಳಿದಿರಾ ಅಚ್ಯುತರೇ, ಇವರು ಸಾಮಾನ್ಯ ಜಾತಿಗರಲ್ಲ. ನಾಟ್ಯ ಶಾಸ್ತ್ರದಲ್ಲೂ ಪರಿಣತಿಯಿದೆಯಂತೆ.

ಅಚ್ಯುತ: ಬೆಡಗಿನ ನುಡಿಯೊಂದು ಕಲೆಯೇ ಪ್ರಭು, ಕಲಾ ಪರಿಣತಿ ಮಾತಿನಲ್ಲಿ ತೋರದು.

ರಾಮದೇವ: ಅಯ್ಯಾ ಚೌಡಯ್ಯ, ನಮ್ಮ ಆಸ್ಥಾನ ವಿದ್ವಾಂಸರಾದ ಅಚ್ಯುತರೊಡನೆ ಸ್ಪರ್ಧಿಸಿ ಶಿವತಾಂಡವರನ್ನಾಡುವಿರಾ?

ಚೌಡಯ್ಯ: ಸ್ವಾಮಿ, ನನ್ನ ಈ ಕಾಯಕವನ್ನು ಪಣಕ್ಕೊಡ್ಡಲಾರೆ; ಆದರೂ ತಮ್ಮ ಆಹ್ವಾನವನ್ನು ತಿರಸ್ಕರಿಸಲಾರೆ. 'ಗಾನವಿದ್ಯಾಗಜೇಂದ್ರಸಿಂಹ' ರು ತಮ್ಮ ನಾಟ್ಯವನ್ನು ಪ್ರದರ್ಶಿಸಲಿ; ಅನಂತರ ಬಹುರೂಪಿ ಚೌಡಯ್ಯನ ಕುಣಿತ.

ಅಚ್ಯುತ: ಮಹಾರಾಜ ವೀಕ್ಷಿಸೋಣಾಗಲಿ ಈ ಅಚ್ಯುತನ ಭವ್ಯ ನಾಟ್ಯ ಪ್ರದರ್ಶನವನ್ನು!
(ಶಿವ ತಾಂಡವ ನೃತ್ಯದ ವಾದ್ಯ ಧ್ವನಿ ಮತ್ತು ಗೆಜ್ಜೆಯ ನಾದ ಧ್ವನಿ).

ಜೌಡಯ್ಯ: ಮಹಾರಾಜಾ, ನೋಡಲಾರೆ! ನೋಡಲಾರೆ!! ಕಲೆಗಾಗಿ ಕಲೆಯನ್ನು ಉಪಾಸನೆ ಮಾಡಿದವರ ಪರಿಯಲ್ಲ; ಹುಟ್ಟು ಕಲೆಯಲ್ಲ; ಹೊಟ್ಟೆ ಹೊರೆಯಲು ಕಲಿತ ಕಲೆ. ಈ ನಾಟ್ಯ ಶೀರಾ ಕೃತಕ, ಶಿವತಾಂಡವವನ್ನು ಕುಣಿದರೆ ಸೃಷ್ಟಿ, ಸ್ಥಿತಿ, ಲಯ, ತಿರೋಭಾವ, ಅನುಗ್ರಹಗಳ ಭಾವ ಗಮ್ಯವಾಗಬೇಡವೆ? ತಾಂಡವದಲ್ಲಿ ಲಾಸ್ಯ ಮಿಶ್ರಣ ಮಾಡಿ ಶುದ್ಧ ತಾಂಡವದ ಛಂದ ವಿಚ್ಛಂದವಾಗಿಹೋಯಿತು. ಹಸ್ತ ಮುದ್ರೆಯಲ್ಲಿ ಶಾಸ್ತ್ರೀಯತೆಯಿಲ್ಲ; ದೃಷ್ಟಿ ಭೇದ ಕೃತಕ; ಭ್ರಮರಿಗಳು ಪಾಲ್ಗಡಲಲ್ಲಿ ಮೇರು ಸುತ್ತಾಡಿದಂತಾಗಬೇಡವೆ? ನೋಡುವವರ ಕಣ್ಣು ತಿರುಗಬೇಡವೆ? ಪುಟಿದರೆ ಮನ್ಮಥನ ಕಯ್ಯ ಚಂಡು ಪುಟಿದಂತಾಗಬೇಡವೆ? ಈಗ ನನ್ನ ಕುಣಿತವನ್ನು ವೀಕ್ಷಿಸೋಣವಾಗಲಿ.

(ನಾಟ್ಯ ವಾದ್ಯ ಮೇಳ ಧ್ವನಿ; ಅದಕ್ಕೆ ತಕ್ಕಂತೆ ಗೆಜ್ಜೆಗಳುಳ್ಳ ಕಾಲ ಸಪ್ಪಳ ಹಿನ್ನೆಲೆಯಲ್ಲಿ ಈ ಕೆಳಗಿನ ಗತ್ತು—)

ತಂದೊಂ ಧಿತ್ತೊಂ ತೊಂ ತೊಂ ಧಿತ್ತೊಂ ; ಧಿಂ ಧಿಮಿ ಧಿಮಿ ಧಿಮಿ ಧಿಂ ಧಿಮಿ ಧಿತ್ತೊಂ ;
ತತ್ತೊಂ ತತ್ತೊಂ ಘುಂ ಘುಮು ಧಿತ್ತೋಂ; ಚಮುಕಂ ತಕನಕ ತಕನಕ ಧಿತ್ತೊಂ;
ಝುಂ ಝುಂ ಝುಂ ಝುಂ ಝುಣ ಕಿಟಧಿತ್ತೊಂ; ಕಿರ್‍ರಟ ಕಿರ್‍ರಟ ಝುಂ
ಝುಂ ಧಿತ್ತೊಂ;
ತಂದ್ರಂ ದಿಕ್ಕಟ ದಿಕ್ಕಟ ಧಿತ್ತೋಂ; ಝೊಂದ್ರಂಕಟ ಝೊಂದ್ರಂಕಟ ಧಿತ್ತೊಂ;

ವಾಮದೇವ: ಭಲೇ ಭಾಪುರೇ! ಇದು ಭೂಲೋಕದ ಕಲೆಯೇ ಅಲ್ಲ. ಸಾಕ್ಷಾತ್ ಕೈಲಾಸಸಾಧನ ನಾಟ್ಯ. ಈ ಅಭಿನಯವನ್ನು ನೋಡಿದ ಕಣ್ಣುಗಳೇ ಸಾರ್ಥಕ್ಯ ಹೊಂದಿದುವು. ನೋಡಿದಿರಾ ಅಚ್ಯುತರೇ, ಇದು ಶಿವ ತಾಂಡವ. ಅಬ್ಬಾ! ಧನ್ಯ ಧನ್ಯ ಜೌಡಯ್ಯ!!

ಅಚ್ಯುತ: ಆಹಾ! ಇವನು ಮಹಾನುಭಾವ; ಇವರು ಮತ್ತಾರೂ ಅಲ್ಲ. ನನ್ನ ಗುರುದೇವ ನನ್ನ ಅಜ್ಞಾನದ ಹಮ್ಮು ಬಿಮ್ಮುಗಳನ್ನು ಮುರಿಯಲು ಬಂದ ಸಾಕ್ಷಾತ್ ಗುರು; ಪರಮ ಗುರು; ಮಹಾಗುರುವೇ ನಿನ್ನ ಪಾದಗಳ ಮೇಲೆ ಅಚ್ಯುತನ ಮಸ್ತಕ. ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸು.

ಜೌಡಯ್ಯ: ಏಳೇಳು ಅಚ್ಯುತರೇ, ನೀವು ಸಂಸ್ಕಾರಿಗಳು, ಭಾವಾಭಿನಯಗಳು ರಸಾಭಿವ್ಯಂಜಕಗಳಾಗಬೇಕಾದರೆ ಗುರು ಮುಖದಿಂದ ತಿಳಿದು ತಪಸ್ವಿನಂತೆ ಅಭ್ಯಸಿಸಿ ಈಶ್ವರ ಪೂಜಾಭಾವದಿಂದ ಮೈಮರೆತು ನಟಿಸಬೇಕು. ಆಗಲೇ ಫಲಕಾರಿ.

ರಾಮದೇವ: ಚೌಡಯ್ಯನವರೇ, ಇನ್ನು ಮುಂದೆ ನೀವು ಈ ರಾಮದೇವ ಭೂಪಾಲನ ಆಸ್ಥಾನದ ನಾಟ್ಯಾಚಾರ್ಯರಾಗಿದ್ದು ನಿಮ್ಮ ಕಲಾಜೀವನವನ್ನು ಬೆಳಗಿಸಿರಿ. ನೀವು ಬೇಡಿದುದನ್ನು ಕೊಡುತ್ತೇನೆ.

ಚೌಡಯ್ಯ: ಮಹಾರಾಜ, ನಾವು ಕಾಯಕ ಸದ್ಭಾವಿಗಳು. ಒಂದು ರಾಜಾಸ್ಥಾನದ ನಾಲ್ಕು ಗೋಡೆಗಳ ಮಧ್ಯದಲ್ಲುಳಿದು ರಾಜ ರಾಣಿಯರ ವಿನೋದದ ವಸ್ತುವಾಗಿ ಕಾಲಕಳೆಯಲಿಚ್ಛೆಯಿಲ್ಲ. ನನ್ನ ಹಿಂದೆ ಸಂಗೀತ, ಹಾಸ್ಯ, ನಾಟ್ಯ, ನಾಟಕ, ಕವಿ, ಗಮಕಿ, ಡೊಂಬ, ಕಲಕೇತ, ಜಾತಿಗ ಮೊದಲಾದ ಕಲೆಗಾರ ಕಾಯಕದ ಕಲಿಗಳಿದ್ದಾರೆ. ನಾನು ಇವರೊಡನೆ ನಾಡಿನುದ್ದಗಲಕ್ಕೂ ಹರಿದು ಜನತೆಯನ್ನು ನಗಿಸಿ, ಅಳಿಸಿ, ಕುಣಿಸಿ, ಕುಪ್ಪಳಿಸಿ ಕಲೋಪಾಸನೆಯ ಜೊತೆಗೆ ಇವುಗಳಿಗೆಲ್ಲ ಕಾಯಕ ಮುದ್ರೆಯೊತ್ತಿ ಇವುಗಳ ವಿಷಯದಲ್ಲಿರುವ ಜನತೆಯ ಕೀಳುಭಾವವನ್ನು ಹೋಗಲಾಡಿಸಬೇಕಾಗಿದೆ. ಯಾವ ಕಾಯಕವೇ ಆಗಲಿ ಅದು ಹರ ಸೇವೆಯೆಂಬುದನ್ನು ಲೋಕಕ್ಕರುಹಬೇಕಾಗಿದೆ. ನಿಮಗೆ ಶಕ್ಯವಾದರೆ ನನ್ನ ಒಂದು ಇಚ್ಛೆಯನ್ನು ನಡಿಸಿಕೊಡಿ.

ರಾಮದೇವ: ತಮ್ಮ ಬಯಕೆಯೇನು ?

ಚೌಡಯ್ಯ: ನಾನು ಈ ಕೊಟ್ಟಗಿರಿಯಲ್ಲಿ ಒಂದು ಮಹಾಗಣಪರ್ವ ಮಾಡಿ, ಗುರು ಲಿಂಗ ಜಂಗಮ ಸೇವಾ ಕಾರ್ಯವನ್ನು ನೆರವೇರಿಸಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ. 12 ಸಾವಿರ ಹಣವನ್ನು ಸಾಲರೂಪವಾಗಿ ಕೊಡಿ. ಮೂರು ವರ್ಷಗಳಲ್ಲಿ ಕಾಯಕ ಮಾಡಿ ಹಣವನ್ನಾರ್ಜಿಸಿ ತಂದು ಸಾಲ ತೀರಿಸುತ್ತೇನೆ. ಈ ಮಾತಿಗೆ ತಪ್ಪಿದರೆ ಋಣಕ್ಕೆ ಇಮ್ಮಡಿ ಋಣ ತೀರಿಸುತ್ತೇನೆ.

ರಾಮದೇವ: ಹಣವನ್ನೇನೋ ಕೊಡಬಹುದು, ಅಡವಿರಿಸಲು ನಿನ್ನಲ್ಲೇನುಂಟು ? ಅಡವಿಲ್ಲದೆ ಇಷ್ಟೊಂದು ದೊಡ್ಡ ಮೊತ್ತದ ಹಣ ಕೊಡುವುದು ವ್ಯವಹಾರವಲ್ಲ.

ಚೌಡಯ್ಯ: ಅಡವು !....ಅಡವು !—ಮಹಾರಾಜಾ, ನಮ್ಮ ಕಲಾಜೀವನವೇ ನಮ್ಮ ಸಂಪತ್ತು. ಅಡ........ವಿ........ಡಲು ಉಂಟು....ಉಂಟು ! ನನ್ನ ಪ್ರೀತಿಯ 'ರಾಮಕ್ರಿಯಾ' ರಾಗವನ್ನೇ ಜಂಗಮದಾಸೋಹಕ್ಕಾಗಿ ಅಡವಿಡುತ್ತೇನೆ. ಇದೇ ನನ್ನ ಪ್ರೀತಿಯ ಸಂಪತ್ತು.

ರಾಮದೇವ: ಹ ಹ ಹ (ನಗು) ಒಂದು ರಾಗವನ್ನು ಒತ್ತೆಯಿಟ್ಟುಕೊಂಡು 12 ಸಾವಿರ ಹೊನ್ನು ಕೊಡುವವರು ಲೋಕದಲ್ಲುಂಟೋ........

ಚೌಡಯ್ಯ; ಮಹಾರಾಜಾ, ಈ ರಾಗ ನನ್ನ ಬಹಿರಂತಃಪ್ರಾಣ ; ನನಗೆ ಲಿಂಗ ಪೂಜೆಯೂ ಈ ರಾಗವೂ ಒಂದೇ. ನನ್ನ ತ್ರಿಕಾಲ ಲಿಂಗಪೂಜಾಕಾಲ ದಲ್ಲಿ ಈ ರಾಗವನ್ನು ಹಾಡಲೇಬೇಕು. ಆದರೆ ಗಣಪರ್ವಮಾಡಬೇಕೆಂಬ ನನ್ನ ಸಂಕಲ್ಪವೂ ಶಿವ ಸಂಕಲ್ಪವೇ ಆಗಿ. ಈ ರಾಗವನ್ನು ಒತ್ತೆಯಿಡಲು ಒಪ್ಪಿದ್ದಷ್ಟೆ ಇಷ್ಟಕ್ಕೂ ನಿಮ್ಮ ಇಷ್ಟ.

ರಾಮದೇವ: ಹಾಗಾದರೆ ಒಮ್ಮೆ ಆ ರಾಗವನ್ನು ಹಾಡಿ ತೋರಿಸು.

ಚೌಡಯ್ಯ: (—ರಾಗ—ರಾಮಕ್ರಿಯಾ)

ಇನ್ನಾಡುವೆ ಜಂಗಮ ಬಹುರೂಪ ;
ಲೋಕಕ್ಕೆ ಬಂದು ಇನ್ನು ನಾ ಹೋಗೆನಯ್ಯ ;
ಇನ್ನು ನಾ ಹೋದೆನಾದರೆ ಎನಗಿರುವ ಠಾವಿಲ್ಲ ;
ಮುಂದೆ ಹೋದವರೆಲ್ಲ ತಹಗಿನಲಿ ಕುಳಿತಿದ್ದಾರು
ನಾನು ತಹಗರಿಕನಾಗಿ ಮೆಲ್ಲನೆ ಇಲ್ಲಿಗೆ ಬಂದೆ.
ಇಲ್ಲೆನ್ನೋ ಮದ್ದಲಿಗ, ಒಲ್ಲೆ ಇನ್ನೇಕೋ ಕಹಳೆಕಾರ
ಬಂಧವ ಹರಿದು ನಿಂತು ಹಾಡಿರೋ, ತಾಳವೆಲ್ಲ ತಳುವಾಯಿತ್ತಲ್ಲ
ಎಲೆ ಕೇಳಿಕೆನಾಥ ನಿಶೂನ್ಯವಾಯಿತ್ತು ರೇಕಣ್ಣ ಪ್ರಿಯನಾಗಿನಾಥನಲ್ಲಿ.

ರಾಮದೇವ: ಆಹಾ ; ಇದುವೇ ಗೀತಭಕ್ತಿ ; ಇದುವೇ ಶಿವಭಕ್ತಿ ; ಇದುವೇ ನಾದ ಬ್ರಹ್ಮೋಪಾಸನೆ ಇವನು ಮಹಾ ಭಕ್ತ ; ಆಹಾ ;! ನಿನ್ನ ಆಲಿಂಗನ ದಿಂದ ಕೃತಾರ್ಥನಾದೆ. (ಆಲಂಗಿಸುವನು) ಚೌಡಯ್ಯ 12 ಸಾವಿರ ಹೊನ್ನು ತೆಗೆದುಕೋ ನಿನ್ನ ಗಣಪರ್ವ ನಡೆಯಲಿ.

( ದೃಶ್ಯ—3 )

ಪಾರ್ವತಿ : ಪರಮೇಶ್ವರ, ಇದೇನು ? ಕೈಲಾಸದ ನಿನ್ನ ಈ ಸಭೆಯಲ್ಲಿನ ಗಂಧರ್ವರ ಗಾನ, ಭೃಂಗಿಯ ನಾಟ್ಯಮಧ್ಯದಲ್ಲೂ ಯಾವುದೋ ಚಿಂತೆಯಲ್ಲಿ ವಿಮ ನಸ್ಕನಾಗಿರುವಂತಿದೆಯಲ್ಲಾ !

ಪರಮೇಶ್ವರ: ಪಾರ್ವತೀ, ಮಹಾಭಕ್ತ ಬಹುರೂಪಿ ಚೌಡಯ್ಯನ ರಾಮಕ್ರಿಯಾ ರಾಗದ ಬಗೆಗೆ ಮೆಲಕು ಹಾಕುತ್ತಿದ್ದೇನೆ.

ಪಾರ್ವತಿ : ಅಂದ ಹಾಗೆ ಕೆಲ ದಿನಗಳಿಂದ ಚೌಡಯ್ಯ ಆ ರಾಗವನ್ನೇ ಹಾಡು ತ್ತಿಲ್ಲವಲ್ಲ !

ಪರಮೇಶ್ವರ: ಪಾರ್ವತೀ, ಒಂದು ಇಕ್ಕಟ್ಟಿಗೆ ಸಿಕ್ಕಿ ಚೌಡಯ್ಯ ಆ ರಾಗ ಹಾಡುತ್ತಿಲ್ಲ.

ಪಾರ್ವತಿ : ಪರಮೇಶ್ವರಾ, ಭಕ್ತರನ್ನು ಇಕ್ಕಟ್ಟಿಗೆ ಸಿಲುಕಿಸಿ ಮೋಜು ನೋಡುವುದು ನಿನ್ನ ಲೀಲೆಗಳಲ್ಲಿ ಒಂದಲ್ಲವೆ? ನಿನ್ನಿಂದ ಪರಿಹಾರವಾಗದ ಇಕ್ಕಟ್ಟೇನು ಚೌಡಯ್ಯನದು ?

ಪರಮೇಶ್ವರ: ರಾಗವನ್ನು ಹಣಕ್ಕೆ ಒತ್ತೆಯಿಟ್ಟು ಗಣಪರ್ವ ಮಾಡಿ, ಋಣಬಾಧೆ ಯಲ್ಲಿ ಸಿಕ್ಕುಬಿದ್ದಿದ್ದಾನೆ ಚೌಡಯ್ಯ.

ಪಾರ್ವತಿ : ಪರಮೇಶಾ, ಭಕ್ತನ ಋಣ ಬಾಧೆ ಭಕ್ತಾಧೀನನಾದ ನಿನ್ನಿಂದ ಪರಿ ಹರಿಸಲಾರದ ಬಾಧೆಯೆ ?

ಪರಮೇಶ್ವರ: ಕಾಯಕ ನಿಷ್ಠರಾದ ಅವರನ್ನು ಮಾತನಾಡಿಸುವುದೇ ಕಷ್ಟ ದೇವಿ ; ನನ್ನನ್ನೇ ತಪ್ಪಿಗೆ ಸಿಕ್ಕುಹಾಕಿಸುತ್ತಾರೆ; ನಿನಗೇನು ಬೇಕು ಬೇಡೆಂದರೆ, ನೀನೇ ಬೇಡು ಕೊಡುತ್ತೇನೆನ್ನುತ್ತಾರೆ. ಶಿವನನ್ನು ಕೂಡ ಅವರು ಏನನ್ನೂ ಬೇಡರು ದೇವಿ. ಈಗಲೇ ಜಂಗಮ ರೂಪ ತಾಳಿ ಹೋಗಿ, ಋಣ ಪರಿಹಾರ ಮಾರ್ಗವನ್ನು ಸೂಚಿಸಿ ಬರುತ್ತೇನೆ.

( ದೃಶ್ಯ—4 )

ಚೌಡಯ್ಯ: ಆಹಾ! ಯಾವುದೋ ಮಹಾಜಂಗಮಮೂರ್ತಿ ಚೌಡಯ್ಯನ ಕುಟೀರ ದತ್ತಬರುತ್ತಿದೆ. ಹೌದು....ಹೌದು....ಜಂಗಮ ; ನನ್ನ ಸರ್ವಾಂತಃಕರಣ ಗಳು ಕಳೆಯೇರುತ್ತಿವೆ. ಮೇರೆ ಮೀರಿ ಆನಂದ ಉಕ್ಕೇರುತ್ತಿದೆ. ಹೌದು....ನನ್ನ ದೀಕ್ಷಾಗುರು ರೇಕಣ್ಣ ಹೇಳಿದಂತೆ ಈ ಮಹಾ ಮೂರ್ತಿಯೇ ಮೋಕ್ಷ ಗುರು ನಾಗಿನಾಥನಾಗಿರಬಹುದು. ರೇಕಣ್ಣ ಪ್ರಿಯ ನಾಗಿನಾಥ....ಆಹಾ ! ಕೃತಾರ್ಥನಾದೆ ! ಧನ್ಯತೆಪಡೆದೆ.

ನಾಗಿನಾಥ : ಶರಣು—ಶರಣಾರ್ಥಿ ಚೌಡಯ್ಯ, ಶರಣು ಶರಣು ಶರಣಾರ್ಥಿ.

ಚೌಡಯ್ಯ: ಮಹಾ ಜಂಗಮಮೂರ್ತಿಯ ಪಾದಗಳಲ್ಲಿ ಸಾಷ್ಟಾಂಗ ಪ್ರಣಾಮಗಳು. ಇತ್ತ ದಯಮಾಡಿಸಿ. ಈ ಆಸನದಲ್ಲಿ ಮುಹೂರ್ತಮಾಡಿ ಪ್ರಭುದೇವ.

ನಾಗಿನಾಥ : ಚೌಡಯ್ಯ ನಾನು ಕಲ್ಯಾಣದಿಂದ ಬಂದಿದ್ದೇನೆ. ನನ್ನ ಹೆಸರು ನಾಗಿನಾಥ. ನಿನ್ನ ರಾಮಕ್ರಿಯಾರಾಗದ ಕೀರ್ತಿಯನ್ನು ಕೇಳಿ ಅದನ್ನು ಕೇಳಿ ಹೋಗಲು ಇಲ್ಲಿಗೆ ಬಂದಿದ್ದೇನೆ.

ಚೌಡಯ್ಯ : ಪ್ರಭುಗಳು ಆ ರಾಗದ ಮಾತನ್ನು ಬಿಟ್ಟು 'ಏನಾದರೂ ಮಾತನಾಡಿ, ಆ ರಾಗವನ್ನು ನಾನೀಗ ಕನಸು ಮನಸ್ಸಿನಲ್ಲೂ ನೆನೆಯುತ್ತಿಲ್ಲ. ಅದು ಇನ್ನೊಬ್ಬರಲ್ಲಿ ಒತ್ತೆಯಿದೆ.

ನಾಗಿನಾಥ : 'ಏನು ಚೌಡಯ್ಯ, ರಾಮಕ್ರಿಯಾ ರಾಗದ ಒತ್ತೆಯೇ ?.........ಅಂಥ ಪ್ರಸಂಗವೇನು ?

ಚೌಡಯ್ಯ : ನಾಗಿನಾಥದೇವ, ಜಂಗಮದಾಸೋಹಕ್ಕಾಗಿ ಪಡೆದ 12 ಸಾವಿರ ಹಣಕ್ಕೆ ಅದು ಒತ್ತೆಯಿದೆ.

ನಾಗಿನಾಥ : ತೆಗೆದುಕೋ 12 ಸಾವಿರ ಹಣವನ್ನು ಅದನ್ನು ಬಿಡಿಸಿ ತಂದು ಹಾಡು; ಇಗೋ ಎಣಿಸಿಕೋ ಹಣ..............ಹುಂ; ತೆಗೆದುಕೋ !

ಚೌಡಯ್ಯ : ಛೆ! ಛೆ! ನೇಮದ ಕೂಲಿಯ ಬಿಟ್ಟು ಕನಕದಾಸೆಗೆ ಕೈಯೊಡ್ಡುವವನು ನಾನಲ್ಲ; ಶಿವನ ವರವಾದ ಕಲೆಯಿಂಟು. ಆ ಕಲೆಯುನ್ನು ವ್ಯಕ್ತಪಡಿಸಲು ಶಿವನ ಪ್ರಸಾದ ಕಾಯವುಂಟು. ಕಾಯಕ ಸದ್ಭಾವದಿಂದ ಗಳಿಸಿ ಸಾಲ ತೀರಿಸುತ್ತೇನೆ; ಜಂಗಮದೇವ, ಈಗ ಬೇರೆ 'ಏನು ಹಾಡಲಿ ? ಯಾವ ವೇಷ ಕಟ್ಟಲಿ,' ಯಾವ ಗಣೆ ಏರಿ ಕುಣಿಯಲಿ ? ಯಾವ ಕಲೆಯನ್ನು ನಿಮ್ಮೆದರು ಪ್ರದರ್ಶಿಸಿ ನಿಮ್ಮ ಇಚ್ಛೆಯನ್ನು ಪೂರೈಸಲಿ ಹೇಳಿ.

ನಾಗಿನಾಥ : ಇಲ್ಲ...... ಇಲ್ಲ. ನಾನು ರಾಮಕ್ರಿಯಾರಾಗವನ್ನೇ ಮಾತ್ರ ಕೇಳಬೇಕೆಂದು ಬಂದಿದ್ದೇನೆ.

ಚೌಡಯ್ಯ : ಅದು ಸಾಧ್ಯವೇ ಇಲ್ಲ. ನಾನು ಮಾಡಿದ ಸಾಲವನ್ನು ನಾನೇ ದುಡಿದು ತೀರಿಸಿದ ಮೇಲೆ ಆ ರಾಗವನ್ನು ಹಾಡುತ್ತೇನೆ.

ನಾಗಿನಾಥ : ಆ ರಾಗವನ್ನು ನೀನು ಹಾಡುವವರೆಗೆ ಇಲ್ಲಿಯೇ ಇರುತ್ತೇನೆ. ಆ ರಾಗ ಕೇಳಿದ ಮೇಲೆ ಮುಂದಿನ ಯೋಜನೆ.

ಚೌಡಯ್ಯ : ಆಗಲಿ ಪ್ರಭುವೇ, ಬೇಡವೆನ್ನುವವರಾರು ? ಇಲ್ಲಿಯೇ ಇದ್ದು ಈ ಚೌಡಯ್ಯನನ್ನು ಉದ್ಧರಿಸು. ಆದರೆ ಜಂಗಮವಾದರೂ ಚೌಡಯ್ಯನ ಪರಿವಾರದಲ್ಲಿ ಕಾಯಕ ಮಾಡಿಕೊಂಡಿರಬೇಕು.

ನಾಗಿನಾಥ : ಆಗಲಿ ಚೌಡಯ್ಯ, ನಾನೂ ಒಂದಿಲ್ಲೊಂದು ಕಾಯಕ ಮಾಡುತ್ತೇನೆ. ನಿನ್ನ ಇಷ್ಟಾರ್ಥ ಕೈಗೂಡಲಿ...... ಚೌಡಯ್ಯ. ನೀನು ಇನ್ನು ನಿನ್ನ ಮೇಳದವರೊಡನೆ ದೇಶ ದೇಶ ತಿರುಗಿ ಬಡಹೋರಿ ಬೊಮ್ಮಯ್ಯ, ಕೋಳೂರ ಕೊಡಗೂಸು, ಕಾರಿಕಾಲಮ್ಮೆ, ಮಾದಾರ ಚೆನ್ನಯ್ಯ, ದಾಸಿಮಾರ್ಯ, ಕೆಂಭಾವಿಭೋಗಣ್ಣ ಸೌಂದರನಂಬಿ, ತಿರುನೀಲಕಂಠಾದಿ ಶಿವಶರಣರ ಚರಿತ್ರೆಗಳನ್ನು ವೇಷ ಕಟ್ಟಿ ಆಡು. ಜನಮನವನ್ನು ಸೂರೆಗೊಳಿಸು. ಆ ಕಾಯಕದಿಂದ ನಿತ್ಯದ ಕೂಲಿ ಸಮೃದ್ಧವಾಗಿಯೇ ಸಿಗುವುದು. ಆ ಧನದಿಂದ ಬೇಗ ಸಾಲ ತೀರಿಸಿ ನನ್ನ ಮನದಿಷ್ಟವನ್ನು ಸಲ್ಲಿಸು. ಅನಂತರ ನೀನು ಅಂತರರಾಷ್ಟ್ರೀಯ ಮಹಾ ನಗರವಾದ ಕಲ್ಯಾಣವನ್ನು ಸೇರು. ಜಂಗಮ ಪ್ರಾಣಿಯಾದ ಬಸವಣ್ಣನಿಂದ ನಿನ್ನ 18 ಜಾತಿಯ ನೂರೊಂದು ಕುಲದ ವೇಷಗಾರರೆಲ್ಲ ಪುನೀತರಾಗಿ ಮಹಾಭಕ್ತರೆನಿಸಿ ಬಾಳಲಿ.

ಚೌಡಯ್ಯ : ಮಹದಾಜ್ಞೆ, ನಾಗಿನಾಥಾಚಾರ್ಯ.

ಬಸವಣ್ಣ : ಅಪ್ಪಣ್ಣ ಗುಡಿ ತೋರಣವ ಕಟ್ಟಿಸು, ಮಹಾಶರಣ ಸಂದೋಹ ಕಲ್ಯಾಣದತ್ತ ಬರುತ್ತಿದೆ.

ರಾಗ—

ಅಂಗೈ ತಿಂದುದೆನ್ನ ಕಂಗಳು ಕೆತ್ತಿಹುವಯ್ಯ;
ಬಂದಹರಯ್ಯ ಪುರಾತನರೆನ್ನ ಮನೆಗೆ
ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ
ಶಿವಾರ್ಚನೆಯ ಮಾಡಿಸುವೆ. ಕೂಡಲ ಸಂಗಮ ದೇವಾ, ನಿಮ್ಮ ಮುಂದೆ.

ಅಪ್ಪಣ್ಣ : ಬಸವಣ್ಣ, ವಿಲಕ್ಷಣಾನಂದಮೂರ್ತಿಯಾದ ನಿನ್ನ ಕನಸೆಲ್ಲ ನನಸೇ ನಿನ್ನ ಕನಸು ಮರೆದೊರಗಿನ ಕನಸಲ್ಲ. —ಆಗಲಿ ಈಗಲೇ ಗುಡಿ ತೋರಣಕಟ್ಟಿಸಿ ಜಾಂಗು ಭಲಾ! ಎನ್ನುವೆನು.

ನಾಗಿನಾಥ : ಚೌಡಯ್ಯ, ಅದೇ ಕಲ್ಯಾಣ ಮಹಾನಗರ, ಅದು ಹೊರಗೂ ಕಲ್ಯಾಣ, ಒಳಗೂ ಕಲ್ಯಾಣ: ಅಗೋ ಗುಡಿ ತೋರಣಂಗಟ್ಟಿ ಭೃತಾಚಾರದ ಸಾಕಾರ ಮೂರ್ತಿಯಾದ ಬಸವಣ್ಣನೇ ನಿನ್ನನ್ನು ಎದುರುಗೊಳ್ಳಲು ಬರುತ್ತಿದ್ದಾನೆ, ಅವನ ದಿವ್ಯ ಭಾವಕ್ಕೆ ಹೊಳೆಯದ ವಿಷಯವಿಲ್ಲ.

ಚೌಡಯ್ಯ: ಆಹಾ ! ನಾಗಿನಾಥಜೀವಾ, ಇದೇನು !! ಪ್ರಮಥಾಚಾರ್ಯ ಬಸವಣ್ಣ ನನ್ನನ್ನು ಎದುರ್ಗೊಳ್ಳಲು ಬರುವನೇ....ಇನ್ನೇನು....ಭೃತ್ಯಾಚಾರದ ಸಾಕಾರ ಮೂರ್ತಿ. ಆಹಾ, ಬಸವರಸ, ಬಸವದೇವ, ಬಸವಣ್ಣ, ದಂಡನಾಥಾಧಿಪಾ ! ಧನ್ಯನಾದೆ........ಧನ್ಯನಾದೆ.

ಬಸವಣ್ಣ : ಬಾ ಬಾ ಮಹಾ ಶರಣ, ಬಹುರೂಪಿ ಚೌಡಯ್ಯ, ಕೂಡಲ ಸಂಗನ ಶರಣರ ಬರವು ನನ್ನ ಪ್ರಾಣದ ಬರವಿನಂತೆ.

ನಾಗಿನಾಥ : ಬಸವಣ್ಣ, ಈ ಮಹಾ ಶರಣ ಚೌಡಯ್ಯ ಜಂಗಮದಾಸೋಹಕ್ಕಾಗಿ ತನ್ನ ರಾಮಕ್ರಿಯಾ ರಾಗವನ್ನೇ ಒತ್ತೆಯಿಟ್ಟು ತನ್ನ ಈ ಸಮಸ್ತ ಕಲೆಗಾರ ತಂಡದೊಡನೆ ದೇಶ ದೇಶ ತಿರುಗಿ, ಬಹುರೂಪಗಳನ್ನಾಡಿ ಕಾಯಕದ ಕೂಲಿಯ ಧನವನಾರ್ಜಿಸಿ ಸಾಲ ತೀರಿಸಿ ಜಂಗಮ ಪ್ರಾಣಿಯಾದ ನಿನ್ನನ್ನು ಕಂಡು ಸುಖಿಸಬೇಕೆಂದು ಬಂದಿದ್ದಾನೆ. ನಿನ್ನ ಸಮ್ಮುಖದಲ್ಲಿ ಇಂದು ನಾನೀಗ ರಾಮಕ್ರಿಯಾ ರಾಗ ಕೇಳಬೇಕು. ಚೌಡಯ್ಯ, ಬಸವಣ್ಣನ ಸಮ್ಮುಖದಲ್ಲಿ ರಾಗ ಹಾಡಿ ಅವನಿಗೂ ನನಗೂ ಸಮಸ್ತ ಶರಣ ಸಂದೋಹಕ್ಕೂ ಆನಂದಗೊಳಿಸು.

ಬಸವಣ್ಣ: ಚೌಡಯ್ಯ ಆ ನಿನ್ನ ಪವಿತ್ರ ರಾಗ ಹಾಡಿ ಕಲ್ಯಾಣದ ಶರಣ ಸಂದೋಹದೊಡನೆ ಈ ಬಸವಣ್ಣನನ್ನು ಆನಂದಗೊಳಿಸಿ, ಈ ಕಿವಿಯ ಬರವನ್ನು ದೂರ ಮಾಡು.

ಚೌಡಯ್ಯ: ಕೃತಾರ್ಥನಾದೆ

(ರಾಗ–ರಾಮಕ್ರಿಯಾ)

ಇನ್ನಾಡುವೆ ಜಂಗಮ ಬಹುರೂಪ;
ಕಲ್ಯಾಣವೆಲ್ಲ ಅರಿಯಬೇಕೆಂದು ಎನ್ನ ಬಹುರೂಪ;
ಕಾಮ ಹೋಯಿತ್ತೋಡಿ, ಎಂದು ಪ್ರಸಾದವ ಮಾಡಿ ಕೊಟ್ಟೊಡೆ,
ಇದು ಬಸವನ ಪ್ರಸಾದವೆಂದು ಕೈಕೊಂಡೆಕಾಣಾ, ರೇಕಣ್ಣ ಪ್ರಿಯನಾಗಿನಾಥ,
ಬಸವಣ್ಣನಿಂದ ಬದುಕಿತೀ ಲೋಕವೆಲ್ಲ.
ಹುಟ್ಟು ಗೆಟ್ಟು ಹಾಳಮೇಲೆ ಬಟ್ಟ ಬಯಲಲೊಬ್ಬನ ಕಂಡೆ,
ಅಂಗವಿಲ್ಲವವಯವಕ್ಕೆ ಸಂಗವಿನ್ನೆಲ್ಲಿಯದಯ್ಯಾ,
ಹಿಂಗುವ ಅವಯವಕ್ಕೆ ಹಿಂಗದ ತೊಡಿಗೆಯ ತೊಡಿಸಿಹೆನೆಂಬ, ಭಂಗಿತರನೇನೆಂಬೆ
ರೇಕಣ್ಣಪ್ರಿಯ ನಾಗಿನಾಥ–ಬಸವಣ್ಣನಿಂದ ಬದುಕಿತೀ ಲೋಕವೆಲ್ಲ.

(ತೆರೆ ಬೀಳುವುದು)

LICENCED TO POST WITHOUT PRE PAYMENT LICENCE NO. 3

SIDDAGANGA MONTHLY Reg. No. KRN Q-



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.